# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಫೆಬ್ರವರಿ ೧೮, ೨೦೧೬ (ಮಾಘ ೨೯, ಶಕ ವರ್ಷ ೧೯೩೭)<br>Bengaluru, Thursday, February 18, 2016 (Magha 29, Shaka Varsha 1937) | ಸಂಚಿಕೆ ೭<br>Issue 7 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ನಿಲಯ ಪಾಲಕರ ಹುದ್ದೆಗಳನ್ನು ತಾಲ್ಲೂಕು ವಿಸ್ತರಣಾಧಿಕಾರಿಗಳ ವೃಂದದಲ್ಲಿ ವಿಲೀನಗೊಳಿಸಿ ಹೊರಡಿಸಿರುವ ಆದೇಶಗಳನ್ನು ಹಿಂಪಡೆಯುವ ಕುರಿತು.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:26.06.2010.
2) ತಿದ್ದುಪಡಿ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:14.10.2011.
3) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅ.ಜ್ಞಾ ಸಂ:ಹಿಂವಕನಿ:ಸಿಬ್ಬಂದಿ–3: ಸಿಆರ್–71:13–14, ದಿನಾಂಕ:28.01.2014
4) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅ.ಜ್ಞಾ ಸಂ:ಹಿಂವಕನಿ:ಸಿಬ್ಬಂದಿ–3: ಸಿಆರ್–80:13–14, ದಿನಾಂಕ:28.01.2014
5) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅ.ಜ್ಞಾ ಸಂ:ಹಿಂವಕನಿ:ಸಿಬ್ಬಂದಿ–3: ಸಿಆರ್–81:13–14, ದಿನಾಂಕ:28.01.2014
6) ಸರ್ಕಾರದ ಪತ್ರ ಸಂಖ್ಯೆ:ಹಿಂವಕ 109 ಬಿಇಟಿ 2014, ದಿನಾಂಕ:2/3.6.2014, 21.11.2014, 20.01.2015 ಮತ್ತು 03.02.2015.
7) ಸರ್ಕಾರದ ಪತ್ರ ಸಂಖ್ಯೆ:ಹಿಂವಕ 343 ಬಿಇಟಿ 2014, ದಿನಾಂಕ:03.11.2014 ಹಾಗೂ 24.01.2015
8) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ:ಹಿಂವಕಇ/ಸಿಬ್ಬಂದಿ–3/ ಸಿಆರ್–16/2014–15, ದಿನಾಂಕ:04.05.2015
9) ದಿನಾಂಕ:04–05–2015 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಸಕಇ 158 ಬಿಇಟಿ 2002 ದಿನಾಂಕ 24.6.2002ರ ಆದೇಶದನ್ವಯ ಪರಿಷ್ಕೃತ ವೇತನ ಶ್ರೇಣಿ (ರೂ.10000–18150)ಯ ನಿಗದಿಗೊಳಪಟ್ಟ ನಿಲಯ ಪಾಲಕರ ಹುದ್ದೆಗಳನ್ನು ವೇತನ ಶ್ರೇಣಿ (ರೂ.10000–18150)ಯ ಕಛೇರಿ ಮೇಲ್ವಿಚಾರಕರು/ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಹುದ್ದೆಯಲ್ಲಿ ವಿಲೀನಗೊಳಿಸಿ ಏಕಹುದ್ದೆಯಾಗಿ ಆದೇಶಿಸಲಾಗಿದೆ. ಈ ಆದೇಶವು ರೂ.10000–18150 ವೇತನ ಶ್ರೇಣಿಯಲ್ಲಿದ್ದ ಆಗಿನ ನಿಲಯ ಪಾಲಕರಿಗೆ ಮಾತ್ರ ಅನ್ವಯಿಸುವುದಾಗಿಯೂ ಆದೇಶದಲ್ಲಿ ತಿಳಿಸಲಾಗಿದೆ. ಅಲ್ಲದೆ ವಿಲೀನ ಆದೇಶದಲ್ಲಿ ಕಾಣಿಸಲಾದ ನಿಲಯ ಪಾಲಕರ ವೃಂದದ ನೌಕರರು ನಿಲಯ ಪಾಲಕರಾಗಿಯೇ ಕಾರ್ಯನಿರ್ವಹಿಸತಕ್ಕದ್ದು ಎಂಬುದಾಗಿಯೂ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ತಿದ್ದುಪಡಿ ಆದೇಶದಲ್ಲಿ, "ಸರ್ಕಾರಿ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:26.06.2010ರ ಆದೇಶ ಭಾಗದ 7 ಮತ್ತು 8ನೇ ಸಾಲಿನಲ್ಲಿದ್ದ "ಆದರೆ ಅವರು ನಿಲಯ ಪಾಲಕರಾಗಿಯೇ ಕಾರ್ಯನಿರ್ವಹಿಸತಕ್ಕದ್ದು" ಎಂಬ ಪದಗಳನ್ನು ಆದೇಶ ಭಾಗದಿಂದ ತೆಗೆದು ಹಾಕಲಾಗಿದೆ. ಇನ್ನುಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಎಂದು ಆದೇಶಿಸಿದೆ".

ಕ್ರಮಾಂಕ (1) ರಲ್ಲಿನ ಆದೇಶವನ್ನು ಹೊರಡಿಸುವ ಪೂರ್ವದಲ್ಲಿ ಇಲಾಖೆಯಲ್ಲಿ ವೇತನ ಶ್ರೇಣಿ ರೂ.10000–18150ಯ ನಿಲಯ ಪಾಲಕರು (ಪುರುಷ) 125 ಮತ್ತು ನಿಲಯ ಪಾಲಕರು (ಮಹಿಳೆ) 76 ಹೀಗೆ ಒಟ್ಟು 201 ನೌಕರರು ಕಾರ್ಯನಿರ್ವಹಿಸುತ್ತಿದ್ದು, ಇದೇ ಅವಧಿಯಲ್ಲಿ ವಿಲೀನಕ್ಕೆ

ಸಂಬಂಧಿಸಿದ ಮತ್ತೊಂದು ವೃಂದವಾದ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ/ಕಛೇರಿ ಮೇಲ್ವಿಚಾರಕರ ವೃಂದದಲ್ಲಿ ಮಂಜೂರಾದ ಹುದ್ದೆಗಳು 213 ಹುದ್ದೆಗಳಲ್ಲಿ, 190 ನೌಕರರು ಕಾರ್ಯನಿರ್ವಹಿಸುತ್ತಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಕೃತ ಜ್ಞಾಪನದಲ್ಲಿ, ದಿ:1.1.2014 ರಂದು ಇದ್ದಂತೆ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು/ಕಛೇರಿ ಮೇಲ್ವಿಚಾರಕರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ 137 ನೌಕರರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ, ಸಂಬಂಧಪಟ್ಟ ವೃಂದದ ನೌಕರರುಗಳಿಂದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿರುತ್ತದೆ

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಅಧಿಕೃತ ಜ್ಞಾಪನದಲ್ಲಿ, ದಿ:1.1.2014 ರಂದು ಇದ್ದಂತೆ ನಿಲಯ ಪಾಲಕರು (ಪುರುಷ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ 113 ನೌಕರರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ, ಸಂಬಂಧಪಟ್ಟ ವೃಂದದ ನೌಕರರುಗಳಿಂದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿರುತ್ತದೆ

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಅಧಿಕೃತ ಜ್ಞಾಪನದಲ್ಲಿ, ದಿ:1.1.2014 ರಂದು ಇದ್ದಂತೆ ನಿಲಯ ಪಾಲಕರು (ಮಹಿಳೆ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ 71 ನೌಕರರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ, ಸಂಬಂಧಪಟ್ಟ ವೃಂದದ ನೌಕರರುಗಳಿಂದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿರುತ್ತದೆ.

ಇಲಾಖೆಯ ಆಯುಕ್ತರ ಕಛೇರಿಯಿಂದ ಹೊರಡಿಸಲಾದ ಈ ಮೇಲೆ ತಿಳಿಸಿದ 03 ವೃಂದಗಳ ತಾತ್ಕಾಲಿಕ ಪದಕ್ರಮ ಪಟ್ಟಿಗಳನ್ನು ಆಕ್ಷೇಪಿಸಿ ಸಲ್ಲಿಸಲಾದ ಮನವಿಗಳ ಮೇರೆಗೆ ಇಲಾಖೆಯ ಜಂಟಿ ನಿರ್ದೇಶಕರು (ಆಡಳಿತ), ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ನಿಲಯ ಪಾಲಕರನ್ನು ದಿ:21.03.2014 ಹಾಗೂ 22.03.2014 ರಂದು ಅವರ ಅಹವಾಲು ಕುರಿತು ವಿಚಾರಣೆ ಮಾಡಿರುತ್ತಾರೆ. ನೌಕರರ ವಿಚಾರಣೆಯಲ್ಲಿ ದಾಖಲಿಸಿಕೊಂಡ ಹೇಳಿಕೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:26.06.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:14.10.2011ರ ಪ್ರಕಾರ ನಿಲಯ ಪಾಲಕರ ಮತ್ತು ವಿಸ್ತರಣಾಧಿಕಾರಿಗಳ ಪದಕ್ರಮಪಟ್ಟಿಯಲ್ಲೇ ನಿಲಯ ಪಾಲಕರನ್ನು ಸೇರಿಸಿ, ಒಂದೇ ಪದಕ್ರಮಪಟ್ಟಿಯನ್ನು ಪ್ರಕಟಿಸುವಂತೆ ವಿನಂತಿಸಿರುತ್ತಾರೆ.

ತದನಂತರ ಸರ್ಕಾರಕ್ಕೆ ದಿ:24.05.2014 ರಂದು (ಕಂಪ್ಯೂಟರ್ ಕ್ರಮ ಸಂಖ್ಯೆ:2088/ಬಿಸಿ/2014, ದಿ:26.5.2014) ಸ್ವೀಕರಿಸಲಾದ ನಿಲಯ ಪಾಲಕರ ವೃಂದದ ನೌಕರರುಗಳ ದಿ:24.5.2012 ರ ಮನವಿಯಲ್ಲಿ, ಪ್ರತ್ಯೇಕ ವೃಂದವಾರು ಪ್ರಚುರ ಪಡಿಸಿರುವ ನಿಲಯ ಪಾಲಕರ ಹಾಗೂ ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ಜೇಷ್ಠತಾ ಪಟ್ಟಿಯು ಕ್ರಮಬದ್ಧವಾಗಿರುವುದಿಲ್ಲ. ಆದಕಾರಣ ತಾವುಗಳು ಮತ್ತೊಮ್ಮೆ ಅವರುಗಳ ಮನವಿಯನ್ನು ಅಂಗೀಕರಿಸಿ ಈಗ ಪ್ರಚುರ ಪಡಿಸಿರುವ ವಿಸ್ತರಣಾಧಿಕಾರಿಗಳ, ನಿಲಯ ಪಾಲಕರು (ಪುರುಷ), ನಿಲಯ ಪಾಲಕರು (ಮಹಿಳೆ) ಈ ಜೇಷ್ಠತೆಯನ್ನು ರದ್ದುಪಡಿಸಿ, ಏಕಹುದ್ದೆಯಾಗಿ ಪರಿಗಣಿಸಿ, ಅಂತಿಮವಾಗಿ ಜೇಷ್ಠತೆಯನ್ನು ಪ್ರಚುರಪಡಿಸಲು ಕೋರಲಾಗಿದೆ. ನೌಕರರ ಈ ಮನವಿ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ:2/3–6–2014 ರ ಪತ್ರದಲ್ಲಿ ಆಯುಕ್ತರ ಕಛೇರಿಯಿಂದ ಪ್ರತ್ಯೇಕವಾಗಿ ಪ್ರಕಟಿಸಲಾದ ನಿಲಯ ಪಾಲಕರು (ಪುರುಷ), ನಿಲಯ ಪಾಲಕರು (ಮಹಿಳೆ) ಮತ್ತು ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ಪದಕ್ರಮ ಪಟ್ಟಿಯನ್ನು ದಿನಾಂಕ:01–01–2014 ಕ್ಕೆ ಪ್ರಕಟಿಸಿರುವುದಕ್ಕೆ ನೌಕರರು ಸಲ್ಲಿಸಿರುವ ಆಕ್ಷೇಪಣೆಗಳನ್ನು ಅಂಗೀಕರಿಸಿ, ಅಂತಿಮವಾಗಿ ಒಟ್ಟುಗೂಡಿಸಿ ಏಕಹುದ್ದೆಯಾಗಿ ವಿಸ್ತರಣಾಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ಪ್ರಚುರಪಡಿಸಿ, ಕೂಲಂಕಷವಾಗಿ ಪರಿಶೀಲಿಸಿ, ಕೂಡಲೇ ಕ್ರಮ ಕೈಗೊಂಡು, ಕೈಗೊಂಡ ಕ್ರಮದ ಬಗ್ಗೆ ಸರ್ಕಾರಕ್ಕೆ ವರದಿ ನೀಡುವಂತೆ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ತಿಳಿಸಲಾಗಿರುತ್ತದೆ.

ಮುಂದುವರೆದು, ನಿಲಯ ಪಾಲಕರುಗಳಾದ ಶ್ರೀ ಎಲ್.ಗುಂಜಿಕರ, ಶ್ರೀ ಬಿ.ಎಸ್.ಅಂಗಡಿ, ಶ್ರೀ ಎಂ.ಎಸ್.ಜನ್ಮಟ್ಟಿ ಮತ್ತು ಇನ್ನಿತರರು ಸರ್ಕಾರಕ್ಕೆ ಸಲ್ಲಿಸಲಾದ ದಿ:12.11.2014 ರ ಮನವಿಯಲ್ಲಿ ದಿ:1.1.2014 ರಲ್ಲಿ ಏಕಹುದ್ದೆಯಾಗಿ ವಿಸ್ತರಣಾಧಿಕಾರಿಗಳ ಜೇಷ್ಠತೆಯಲ್ಲಿ ಸೇರ್ಪಡೆ ಮಾಡಿ ಪ್ರಚುರ ಪಡಿಸಿ, ನೌಕರರ ಹಿತಾಸಕ್ತಿಯನ್ನು ಕಾಪಾಡಬೇಕಾಗಿ ಕೋರುತ್ತಾ, ಆಯುಕ್ತರಿಗೆ ಏಕಹುದ್ದೆಯಾಗಿ ಜೇಷ್ಠತೆಯನ್ನು ಪ್ರಚುರಪಡಿಸಲು ಆದೇಶಿಸಬೇಕಾಗಿ ಕೋರಿರುತ್ತಾರೆ. ಈ ಸಂಬಂಧ ಮೇಲೆ ಓದಲಾದ ಉಲ್ಲೇಖ (6) ರ ದಿನಾಂಕ:21.11.2014 ಮತ್ತು ದಿ:20.1.2015 ರ ನೆನಪೋಲೆಯಲ್ಲಿ ವಿಷಯ ಕುರಿತು ಪರಿಶೀಲಿಸಿ, ವಿವರಗಳೊಂದಿಗೆ ಸರ್ಕಾರಕ್ಕೆ ವರದಿ ನೀಡುವಂತೆ ಕೋರಲಾಗಿದೆ.

ನಿಲಯ ಪಾಲಕರು ಪುನ: ಸರ್ಕಾರಕ್ಕೆ ಸಲ್ಲಿಸಿರುವ ದಿ:30.01.2015ರ ಮನವಿಯಲ್ಲಿ ನಿಲಯ ಪಾಲಕರ ಹುದ್ದೆಗಳು ರದ್ದಾಗಿರುವುದರಿಂದ ವಿಸ್ತರಣಾಧಿಕಾರಿಗಳ ಜೇಷ್ಠತೆಯಲ್ಲಿ ಸೇರಿಸುವಂತೆ ಆಕ್ಷೇಪಣೆದಾರರು ಒದಗಿಸಿರುವ ದಾಖಲೆಗಳ ಹಿನ್ನೆಲೆಯಲ್ಲಿ ವಿಸ್ತರಣಾಧಿಕಾರಿಗಳ ಜೇಷ್ಠತೆಯಲ್ಲಿ ಏಕಹುದ್ದೆಯಾಗಿ ಪ್ರಚುರಪಡಿಸಲು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಆದೇಶ ನೀಡುವಂತೆ ವಿನಂತಿಸಲಾಗಿರುತ್ತದೆ. ಈ ಸಂಬಂಧ ಮೇಲೆ ಓದಲಾದ ಉಲ್ಲೇಖ (6) ರ ಪತ್ರ ದಿನಾಂಕ:03.02.2015 ರಲ್ಲಿ ನಿಲಯ ಪಾಲಕರ ಹುದ್ದೆಗಳ ವಿಲೀನ ಕುರಿತು ಸರ್ಕಾರದಿಂದ ಹೊರಡಿಸಲಾದ ಆದೇಶದ ಪ್ರಕಾರ ನಿಲಯ ಪಾಲಕರ ಹುದ್ದೆಗಳನ್ನು ವಿಸ್ತರಣಾಧಿಕಾರಿಗಳ ಜೇಷ್ಠತೆ ಪಟ್ಟಿಯಲ್ಲಿ ಸೇರ್ಪಡೆಗೊಳಿಸಿ, ಏಕ ಹುದ್ದೆಯಾಗಿ ಪ್ರಚುರಪಡಿಸುವಂತೆ ಆದೇಶಿಸಿದ್ದು, ಈ ಕುರಿತು ಕೈಗೊಂಡ ಕ್ರಮದ ಬಗ್ಗೆ ವರದಿ ನೀಡುವಂತೆ ಇಲಾಖೆಯ ಆಯುಕ್ತರಿಗೆ ತಿಳಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ:(7) ರಲ್ಲಿ ಓದಲಾದ ಪತ್ರಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ನಿಲಯ ಪಾಲಕರ ಹುದ್ದೆಗಳನ್ನು ರದ್ದುಪಡಿಸಿ ವಿಸ್ತರಣಾಧಿಕಾರಿಗಳ ಹುದ್ದೆಯಲ್ಲಿ ಏಕಹುದ್ದೆಯಾಗಿ ವಿಲೀನಗೊಳಿಸಿರುವ ಪ್ರಯುಕ್ತ ಹಾಲಿ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಯಾಗಿರುವ ನಿಲಯ ಪಾಲಕರು (ವಾರ್ಡನ್) ಎಂಬ ಪದನಾಮವನ್ನು ನಿರಶನಗೊಳಿಸುವ ಬಗ್ಗೆ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಂಡು ವರದಿ ನೀಡುವಂತೆ ಕೋರಲಾಗಿದೆ.

ನಿಲಯ ಪಾಲಕರ ಹುದ್ದೆಗಳನ್ನು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು/ಕಛೇರಿ ಮೇಲ್ವಿಚಾರಕರ ಹುದ್ದೆಯಲ್ಲಿ ವಿಲೀನಗೊಳಿಸುವ ಕುರಿತಂತೆ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ಪತ್ರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರಕ್ಕೆ ವರದಿ ಸಲ್ಲಿಸಿರುವರು. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ತಮ್ಮ ವರದಿಯಲ್ಲಿ ಈ ಕೆಳಕಾಣಿಸಿದ ಕಾರಣಗಳಿಗೆ ಕ್ರಮಾಂಕ (1) ಮತ್ತು (2) ರ ಆದೇಶಗಳನ್ವಯ ನಿಲಯ ಪಾಲಕರು (ಪುರುಷ) ಮತ್ತು ನಿಲಯ ಪಾಲಕರು (ಮಹಿಳೆ) ಈ ಹುದ್ದೆಗಳನ್ನು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ/ಕಛೇರಿ ಮೇಲ್ವಿಚಾರಕರ ಹುದ್ದೆಯಲ್ಲಿ ವಿಲೀನಗೊಳಿಸಿ ಈ ವೃಂದಗಳನ್ನು ಏಕಹುದ್ದೆಯನ್ನಾಗಿ ಪರಿಗಣಿಸಿ ಈ ವೃಂದಗಳಲ್ಲಿನ ನೌಕರರಿಗೆ ಒಂದೇ ಪದಕ್ರಮ ಪಟ್ಟಿಯನ್ನು ಪ್ರಕಟಿಸುವ ಮೂಲಕ ಈ ಆದೇಶಗಳನ್ನು ಜಾರಿಗೊಳಿಸಲು ಸಾಧ್ಯವಾಗುವುದಿಲ್ಲವೆಂದು ವರದಿ ನೀಡಿರುತ್ತಾರೆ.

(1) ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕಛೇರಿ ಮೇಲ್ವಿಚಾರಕರು / ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಹುದ್ದೆಯನ್ನು ಶೇಕಡ 100 ರಂತೆ ಮುಂಬಡ್ತಿ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ನಿಯಮಗಳ ಪ್ರಕಾರ ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು ಮತ್ತು ನಿಲಯಪಾಲಕರ ವೃಂದಗಳು ಮುಂಬಡ್ತಿಗೆ ಪೋಷಕ ವೃಂದಗಳಾಗಿರುತ್ತವೆ (Feeder Cadres). ದಿನಾಂಕ 24.06.2002 ರ ಸರ್ಕಾರದ ಆದೇಶದಲ್ಲಿ ನಿಲಯಪಾಲಕರ ವೇತನ ಶ್ರೇಣಿಯನ್ನು ಪ್ರಥಮ ದರ್ಜೆ ಸಹಾಯಕರ ಮತ್ತು ಶೀಘ್ರಲಿಪಿಗಾರರ ವೃಂದದ ಸಮಾನಾಂತರ ವೇತನ ಶ್ರೇಣಿಯಿಂದ ಕಛೇರಿ ಮೇಲ್ವಿಚಾರಕರು/ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ವೃಂದದ ವೇತನ ಶ್ರೇಣಿಗೆ ಉನ್ನತೀಕರಿಸಲಾಗಿದ್ದು, ಪ್ರಥಮ ದರ್ಜೆ ಸಹಾಯಕರು / ಶೀಘ್ರಲಿಪಿಗಾರರ ವೇತನ ಶ್ರೇಣಿಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ನಿಲಯಪಾಲಕರಿಗೆ ದಿನಾಂಕ:24.06.2002 ರ ನಂತರ ಕಛೇರಿ ಮೇಲ್ವಿಚಾರಕರ / ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಹುದ್ದೆಗೆ ಮುಂಬಡ್ತಿ ನೀಡಲಾಗದಿದ್ದರೂ, ವೇತನ ಶ್ರೇಣಿಯ ಉನ್ನತೀಕರಣದಿಂದ ಅವರಿಗೆ ಆರ್ಥಿಕ ಪ್ರಯೋಜನವಾಗಿರುತ್ತದೆ. ಪ್ರಥಮ ದರ್ಜೆ ಸಹಾಯಕರು ಮತ್ತು ಶೀಘ್ರಲಿಪಿಗಾರರು ಸದರಿ ಹುದ್ದೆಗೆ ಮುಂಬಡ್ತಿ ಹೊಂದಲು ನಿಗದಿತ ಅರ್ಹತೆಯನ್ನು ಹೊಂದಿದ್ದರೂ ಸಹ 24.06.2002 ರ ನಂತರ ಈವರೆವಿಗೆ ಮುಂಬಡ್ತಿ ಪಡೆದಿರುವುದಿಲ್ಲ;

(2) ನಿಲಯಪಾಲಕರ ವೃಂದದ ನೌಕರರನ್ನು ಈ ಮೇಲ್ಕಾಣಿಸಿದ ಸರ್ಕಾರದ ಆದೇಶಗಳನ್ವಯ ಕಛೇರಿ ಮೇಲ್ವಿಚಾರಕರ / ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ವೃಂದದಲ್ಲಿ ವಿಲೀನಗೊಳಿಸಬೇಕಾದಲ್ಲಿ, 303 ಕ.ಮೇ/ತಾ.ಹಿಂ.ವ.ವಿ ಹುದ್ದೆಗಳ ಅಗತ್ಯವಿರುತ್ತದೆ. ಆದರೆ, ಈ ವೃಂದದ ಒಟ್ಟಾರೆ ಮಂಜೂರಾದ ಹುದ್ದೆಗಳ ಸಂಖ್ಯೆ ಕೇವಲ 213 ಇರುತ್ತದೆ. ವಿಲೀನ ಆದೇಶಗಳಂತೆ, 175 ನಿಲಯಪಾಲಕರನ್ನು ವಿಲೀನಗೊಳಿಸಲು 90 ಕ.ಮೇ/ತಾ.ಹಿಂ.ವ.ವಿ ಹುದ್ದೆಗಳ ಕೊರತೆ ಬೀಳುತ್ತದೆ. ಇದರಿಂದಾಗಿ, ನಿಲಯಪಾಲಕರ ನೌಕರರ ಸೇವೆಯನ್ನು ವಿಲೀನಗೊಳಿಸಲು ಸಾಧ್ಯವಾಗಿರುವುದಿಲ್ಲ.

ನಿಲಯ ಪಾಲಕರ ಹುದ್ದೆಗಳನ್ನು ಹಿಂದುಳಿದ ವರ್ಗಗಳ ಕಛೇರಿ ಮೇಲ್ವಿಚಾರಕರು/ ವಿಸ್ತರಣಾಧಿಕಾರಿಗಳ ಹುದ್ದೆಯಲ್ಲಿ ವಿಲೀನಗೊಳಿಸುವಲ್ಲಿ ಮೇಲೆ ತಿಳಿಸಿದ ಆಡಳಿತಾತ್ಮಕ ತೊಡಕುಗಳು ಇರುವುದರ ಜೊತೆಗೆ ವಿಲೀನ ಆದೇಶಗಳನ್ನು ಜಾರಿಗೊಳಿಸುವುದರಿಂದ ಕೆಳಕಾಣಿಸಿದ ಸಮಸ್ಯೆಗಳು ಉದ್ಭವಿಸುವುದಾಗಿ ವರದಿಸಿರುತ್ತಾರೆ.

(ಅ) 90 ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ಹುದ್ದೆಗಳನ್ನು ಹೆಚ್ಚುವರಿಯಾಗಿ (Supernumerary)ರೂ.20000–36300ರ ವೇತನ ಶ್ರೇಣಿಯಲ್ಲಿ ಸೃಜಿಸ ಬೇಕಾಗುತ್ತಿತ್ತು. ಹಾಗೂ ಅಗತ್ಯ ಸಂಖ್ಯೆಯ ಕಛೇರಿ ಮೇಲ್ವಿಚಾರಕರು, ಮತ್ತು 176 ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಹುದ್ದೆಗಳ ಸಂಖ್ಯೆ ಮೀರುವ ಹೆಚ್ಚುವರಿ ನೌಕರರಿಗೆ ಯಾವ ರೀತಿಯ ಕರ್ತವ್ಯ ಮತ್ತು ಜವಾಬ್ದಾರಿಯನ್ನು ವಹಿಸಬೇಕು ಎನ್ನುವ ಪ್ರಶ್ನೆ ಉದ್ಭವಿಸುತ್ತದೆ;

(ಆ) ನಿಲಯಪಾಲಕ ವೃಂದದ ನೌಕರರನ್ನು ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ವೃಂದದಲ್ಲಿ ಒಂದೇ ಬಾರಿಗೆ ವಿಲೀನಗೊಳಿಸುವ ಪ್ರಕ್ರಿಯೆಯಿಂದಾಗಿ, ಪ್ರಥಮ ದರ್ಜೆ ಸಹಾಯಕರು (40) / ಶೀಘ್ರಲಿಪಿಗಾರರ (04) ವೃಂದಗಳಲ್ಲಿ 2002 ರಿಂದ ಮುಂಬಡ್ತಿ ಹೊಂದದೇ ಕಾರ್ಯ ನಿರ್ವಹಿಸುತ್ತಿರುವ ನೌಕರರುಗಳು ಮತ್ತಷ್ಟು ಅವಧಿಯಲ್ಲಿ ಮುಂಬಡ್ತಿ ಸೇವಾ ಸೌಲಭ್ಯದಿಂದ ವಂಚಿತರಾಗುವರು;

(ಇ) **<u>"ನಿಲಯಪಾಲಕ"</u>** ವೃಂದವು **<u>"ನಿಲಯ ಮೇಲ್ವಿಚಾರಕರ"</u>** ವೃಂದದ ನೌಕರರಿಗೆ ಮುಂಬಡ್ತಿಗೆ ಹಾಲಿ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿದ್ದು, ನಿಲಯಪಾಲಕರ ವೃಂದದ ನೌಕರರನ್ನು ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ವೃಂದದಲ್ಲಿ ವಿಲೀನಗೊಳಿಸುವ ಪ್ರಕ್ರಿಯೆಯಿಂದಾಗಿ, ನಿಲಯ ಮೇಲ್ವಿಚಾರಕ ವೃಂದಕ್ಕೆ ಮುಂಬಡ್ತಿಗೆ ಅವಕಾಶವಿದ್ದ ನಿಲಯಪಾಲಕರ ವೃಂದವು ಇಲ್ಲದಂತಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:26.06.2010 ರಂದು ಬಿಸಿಎಂ ನಿಲಯ ಪಾಲಕರಾಗಿ ಕಾರ್ಯನಿರ್ವಹಿಸುತ್ತಿರುವ ನೌಕರರನ್ನು ವಿಸ್ತರಣಾಧಿಕಾರಿಗಳ ಹುದ್ದೆಯಲ್ಲಿ ಆಡಳಿತ ಹಿತದೃಷ್ಟಿಯಿಂದ ಏಕ ಹುದ್ದೆಯಾಗಿ ಪರಿಗಣಿಸಿ ಆದೇಶಿಸಿರುವ ಸರ್ಕಾರದ ಆದೇಶವನ್ನು ಅನುಷ್ಠಾನಗೊಳಿಸದಿರುವ ಬಗ್ಗೆ ಈ ಸಂಬಂಧ ದಿನಾಂಕ:04.05.2015ರಂದು ನಡೆದ ಸಭೆಯಲ್ಲಿ ಪರಿಶೀಲಿಸಿ ಕೆಳಕಂಡ ಕಾರಣಗಳಿಗೆ ಈ ಆದೇಶಗಳನ್ನು ಜಾರಿಗೊಳಿಸಲು ಆಡಳಿತಾತ್ಮಕವಾಗಿ ಸಾಧ್ಯವಾಗುವುದಿಲ್ಲವೆಂಬ ಅಭಿಪ್ರಾಯಕ್ಕೆ ಬರಲಾಗಿರುತ್ತದೆ.

1) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ (ವೇತನ ಶ್ರೇಣಿ ರೂ.20000–36300) ವೃಂದದ ಒಟ್ಟು 213 (37+176) ಹುದ್ದೆಗಳಿದ್ದು, ಇದರಲ್ಲಿ ಹಾಲಿ 128 ನೌಕರರು ಕಾರ್ಯನಿರ್ವಹಿಸುತ್ತಿದ್ದು, ಇವರ ಜೊತೆಗೆ 175 ನಿಲಯ ಪಾಲಕರ (ವೇತನ ಶ್ರೇಣಿ ರೂ.20000–36300)ಸೇವೆಯನ್ನು ವಿಲೀನಗೊಳಿಸಬೇಕಾದಲ್ಲಿ 213 ಕ್ಕೂ ಹೆಚ್ಚಿನ ಸಂಖ್ಯೆಯ ಅಂದರೆ 90 ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಬೇಕಾಗುತ್ತದೆ. ಇಲ್ಲವಾದಲ್ಲಿ 90 ನಿಲಯ ಪಾಲಕರನ್ನು ವಿಲೀನಗೊಳಿಸದೇ ಹಾಗೆಯೇ ನಿಲಯ ಪಾಲಕರಾಗಿ ಮುಂದುವರೆಸಬೇಕಾಗುವ ಅನಿವಾರ್ಯತೆಯಿಂದಾಗಿ ವಿಲೀನ ಆದೇಶಗಳ ಜಾರಿ ಸಾಧ್ಯವಾಗುವುದಿಲ್ಲ;

2) ನಿಲಯ ಪಾಲಕರ ವೃಂದದ ನೌಕರರ ಸೇವೆಯನ್ನು ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ (ವೇತನ ಶ್ರೇಣಿ ರೂ.20000–36300) ವೃಂದದಲ್ಲಿ ವಿಲೀನಗೊಳಿಸುವ ಕ್ರಮದಿಂದ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕಛೇರಿ ಮೇಲ್ವಿಚಾರಕರು/ವಿಸ್ತರಣಾಧಿಕಾರಿಗಳ ವೃಂದಕ್ಕೆ ಮುಂಬಡ್ತಿ ಹೊಂದಲು ಇತರ ಪೋಷಕ ವೃಂದಗಳಾಗಿರುವ ಪ್ರಥಮ ದರ್ಜೆ ಸಹಾಯಕರು ಮತ್ತು ಶೀಘ್ರಲಿಪಿಗಾರರ (ವೇತನ ಶ್ರೇಣಿ ರೂ.14550–26700) ವೃಂದದ ನೌಕರರುಗಳಿಗೆ ಮುಂಬಡ್ತಿ ಅವಕಾಶ ದೀರ್ಘಾವಧಿಗೆ ತಪ್ಪಿಹೋಗುವ ಸನ್ನಿವೇಶ ಉದ್ಭವಿಸುತ್ತದೆ; ಹಾಗೂ

3) ನಿಲಯ ಮೇಲ್ವಿಚಾರಕರ ವೃಂದ (ವೇತನ ಶ್ರೇಣಿ ರೂ.14550–26700)ದಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ನೌಕರರುಗಳಿಗೆ ಸಹ ನಿಲಯ ಪಾಲಕರ ಸೇವೆಯನ್ನು ವಿಲೀನಗೊಳಿಸುವುದರಿಂದ ಮುಂಬಡ್ತಿ ಅವಕಾಶಗಳು ಇಲ್ಲದಂತಾಗುತ್ತವೆ;

ಈ ಮೇಲ್ಕಂಡ ಅಂಶಗಳನ್ನು ಸಭೆಯಲ್ಲಿ ಪರಿಶೀಲಿಸಿದ ನಂತರ, ಸರ್ಕಾರದ ಆದೇಶ ಸಂಖ್ಯೆ:ಸಕಇ 415 ಬಿಇಟಿ 2008, ದಿನಾಂಕ:26.06.2010 ಮತ್ತು ತಿದ್ದುಪಡಿ ಆದೇಶ ಸಂಖ್ಯೆ: ಸಕಇ 415 ಬಿಇಟಿ 2008 (ಭಾ), ದಿನಾಂಕ:14.10.2011ಗಳನ್ನು ಜಾರಿಗೊಳಿಸಲು ಸಾಧ್ಯವಿಲ್ಲದ ಕಾರಣ ಸದರಿ ಆದೇಶಗಳನ್ನು ಹಿಂದಕ್ಕೆ ಪಡೆಯುವುದು ಸೂಕ್ತವೆಂದು ಸಭೆಯಲ್ಲಿ ನಿರ್ಧರಿಸಲಾಗಿರುತ್ತದೆ.

ನಿಲಯ ಪಾಲಕರು (ಪುರುಷ), ನಿಲಯ ಪಾಲಕರು (ಮಹಿಳೆ) ಈ ಹುದ್ದೆಗಳನ್ನು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು/ಕಛೇರಿ ಮೇಲ್ವಿಚಾರಕರ ಹುದ್ದೆಯಲ್ಲಿ ವಿಲೀನಗೊಳಿಸಿ ಹೊರಡಿಸಿರುವ ಆದೇಶವನ್ನು ನಿಯಮಾನುಸಾರ ಜಾರಿಗೊಳಿಸಲು ಆಡಳಿತಾತ್ಮಕವಾಗಿ ಸಾಧ್ಯವಾಗದೇ ಇರುವುದರಿಂದ, ಈ ಆದೇಶಗಳನ್ನು ಹಿಂಪಡೆಯುವುದು ಅನಿವಾರ್ಯವಾಗಿದ್ದು, ಹಿಂಪಡೆಯುವುದು ಸೂಕ್ತವೆಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಹಿಂವಕ 170 ಬಿಇಟಿ 2015, ಬೆಂಗಳೂರು, ದಿನಾಂಕ 14.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಸಕಇ 415 ಬಿಇಟಿ 2008 ದಿನಾಂಕ:26.06.2010 ಮತ್ತು ತಿದ್ದುಪಡಿ ಆದೇಶ ಸಂಖ್ಯೆ: ಸಕಇ 415 ಬಿಇಟಿ 2008 (ಭಾ) ದಿನಾಂಕ 14.10.2011ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 33**

**SC. 300**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ನಗರದ ಕುಡಿಯುವ ನೀರು ಸರಬರಾಜು ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ನಅಇ 20 ಯುಡಬ್ಲ್ಯೂಎಸ್ 2012 ಬೆಂಗಳೂರು ದಿನಾಂಕ08–02–2013.
2) ದಿನಾಂಕ; 13–11–2013 ರಂದು ನಡೆದ ಶಿವಮೊಗ್ಗ ನಗರಸಭೆಯ ಠರಾವು.
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರ ಪತ್ರದ ಸಂಖ್ಯೆ:ಕಜಮ/ಮುಇ/ಆಶ್ರೇಕಾಅ/ ಉಮುಅ–(1)/ತಾ.ಸ–8/ಸ.ಅ–8/1617/2013–14 ದಿನಾಂಕ: 21–8–2014 ಮತ್ತು ದಿನಾಂಕ: 28–08–2015
4) ಆಯುಕ್ತರು, ಶಿವಮೊಗ್ಗ ಮಹಾನಗರ ಪಾಲಿಕೆಯ ಪತ್ರ ಸಂಖ್ಯೆ: ಸಿ.ಆರ್.45 ದಿನಾಂಕ: 09–04–2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಶಿವಮೊಗ್ಗ ನಗರಕ್ಕೆ ನಿರಂತರ ನೀರು ಸರಬರಾಜು ಯೋಜನೆಗೆ ರೂ.10494.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿರುವುದರಿಂದ, ನಿರಂತರ ನೀರು ಸರಬರಾಜು ಯೋಜನೆಯನ್ನು ಸುಗಮವಾಗಿ ಕಾರ್ಯಗತಗೊಳಿಸಲು ಹಾಲಿ ಇರುವ ನೀರು ಸರಬರಾಜು ವ್ಯವಸ್ಥೆಯನ್ನು ಮಂಡಳಿಯೇ ನಿರ್ವಹಿಸಿ ಅಧ್ಯಯನ ಮಾಡುವುದು ಸೂಕ್ತವಾಗಿರುತ್ತದೆ ಎಂದು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಅಭಿಪ್ರಾಯ ಪಟ್ಟಿರುತ್ತದೆ. ಆದುದರಿಂದ, ಶಿವಮೊಗ್ಗ ಮಹಾನಗರ ಪಾಲಿಕೆಯು ದಿನಾಂಕ: 13/11/2013 ರಂದು ನಡೆಸಿದ ಕೌನ್ಸಿಲ್‌ನ ಸಭೆಯಲ್ಲಿ ಹಾಲಿ ನೀರು ಸರಬರಾಜು ವ್ಯವಸ್ಥೆಯನ್ನು ಮಂಡಳಿಗೆ ಹಸ್ತಾಂತರಿಸಲು ಹಾಗೂ ಮಂಡಳಿಯೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲು ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ನಿರ್ಣಯಿಸಲಾಗಿದೆ. ಮೇಲೆ ಓದಲಾದ ಕ್ರಮಾಂಕ (3) ರಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಹಾಲಿ ಇರುವ ಕುಡಿಯುವ ನೀರಿನ ಸಂಪೂರ್ಣ ಪಾಲನೆ ಮತ್ತು ನಿರ್ವಹಣೆಯನ್ನು ರೂ.6.00 ಕೋಟಿಗಳ seed money ಯೊಂದಿಗೆ ಹಸ್ತಾಂತರಿಸುವಂತೆ ಶಿವಮೊಗ್ಗ ಮಹಾನಗರ ಪಾಲಿಕೆಯನ್ನು ಕೋರಿರುತ್ತದೆ. ಅದರಂತೆ, ಆಯುಕ್ತರು, ಶಿವಮೊಗ್ಗ ಮಹಾನಗರ ಪಾಲಿಕೆ ಇವರು ಮೇಲೆ ಓದಲಾದ ಕ್ರಮಾಂಕ (4) ರ ಪತ್ರದಲ್ಲಿ ಶಿವಮೊಗ್ಗ ನಗರದ ಹಾಲಿ ನೀರು ಸರಬರಾಜು ವ್ಯವಸ್ಥೆಯನ್ನು ಹಸ್ತಾಂತರಿಸಲು ನಿರ್ಧರಿಸಿ, ರೂ.6.00 ಕೋಟಿಗಳ ಅಂದಾಜು ವೆಚ್ಚದೊಂದಿಗೆ ಶಿವಮೊಗ್ಗ ಮಹಾನಗರ ಪಾಲಿಕೆಯ ನೀರು ಸರಬರಾಜು ವ್ಯವಸ್ಥೆಯ ಪಾಲನೆ ಮತ್ತು ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ವಹಿಸಿಕೊಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 12 ಯುಡಬ್ಲ್ಯೂಎಸ್ 2014 ಬೆಂಗಳೂರು, ದಿನಾಂಕ: 04–12–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಮಹಾನಗರ ಪಾಲಿಕೆಯ ನೀರು ಸರಬರಾಜು ವ್ಯವಸ್ಥೆಯ ಪಾಲನೆ ಮತ್ತು ನಿರ್ವಹಣೆಯನ್ನು ಶಿವಮೊಗ್ಗ ಮಹಾನಗರ ಪಾಲಿಕೆಯಿಂದ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಶಿವಮೊಗ್ಗ ರವರಿಗೆ ವಹಿಸಿಕೊಡಲು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಕೂಡಲೇ ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ತತ್ಸಂಬಂಧವಾಗಿ ಈಗಾಗಲೇ ಉಭಯ ಸಂಸ್ಥೆಗಳು ಮಾಡಿಕೊಂಡ ಒಪ್ಪಂದದಂತೆ ಹಾಗೂ ಅನುಬಂಧದಲ್ಲಿ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ತಕ್ಷಣವೇ ಮುಂದಿನ ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ**

**ಶಿವಮೊಗ್ಗ ನಗರದ ಸಗಟು ಮತ್ತು ರೀಟೈಲ್ ನೀರು ಸರಬರಾಜು ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸಲು ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ನಅಇ 12 ಯುಡಬ್ಲ್ಯುಎಸ್ 2014 ದಿನಾಂಕ: 04–12–2015 ಕ್ಕೆ ಷರತ್ತು ಮತ್ತು ನಿಬಂಧನೆಗಳು:**

1) ಶಿವಮೊಗ್ಗ ಮಹಾನಗರಪಾಲಿಕೆಯು ನೀರು ಸರಬರಾಜು ವ್ಯವಸ್ಥೆಗೆ ಸಂಬಂಧಿಸಿದ ಎಲ್ಲಾ ಚರ ಮತ್ತು ಸ್ಥಿರ ಆಸ್ತಿಗಳನ್ನು ಭೌತಿಕವಾಗಿ ಮಂಡಳಿ ವಶಕ್ಕೆ ಹಸ್ತಾಂತರಿಸುವುದು, ಹಾಗೂ ನೀರು ಸರಬರಾಜು ನಿರ್ವಹಣೆಗೆ ಸಂಬಂಧಿಸಿದಂತೆ ದುರಸ್ಥಿ, ನಿರ್ವಹಣೆ, ಬಿಲ್ಲು ತಯಾರಿಕೆ, ವಸೂಲಾತಿ, ಗುತ್ತಿಗೆದಾರರ ಪಾವತಿ, ಮಾಡಿದ ಹಣ ಹಾಗೂ ಬಾಕಿ ಪಾವತಿ ಮಾಡಬೇಕಾಗಿರುವ ವಿವರಗಳು, ರೇಖಾ ಚಿತ್ರಗಳು (ಡ್ರಾಯಿಂಗ್ಸ್), ನೀರು ವಿತರಣಾ ಜಾಲದ ನಕ್ಷೆಗಳು, ದಾಖಲೆಗಳ ಕಡತಗಳು, ಸ್ಟಾಕ್ ಪುಸ್ತಕಗಳು ಮತ್ತು ಮಹಾನಗರ ಪಾಲಿಕೆಯಲ್ಲಿ ಬಾಕಿ ಉಳಿದಿರುವ ಇತರೆ ಸಂಬಂಧಪಟ್ಟ ಸಾಮಗ್ರಿಗಳನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸಬೇಕು, ಹಾಗೂ ಮಂಡಳಿಯು ಒಡಂಬಡಿಕೆಯನ್ನು ಮಾಡಿಕೊಳ್ಳುವ ಸಂದರ್ಭದಲ್ಲಿ ಮಂಡಳಿಯಿಂದ ಪಡೆದುಕೊಂಡ ದಾಖಲೆ, ಸಾಮಗ್ರಿಗಳು ಹಾಗೂ ಚರ ಮತ್ತು ಸ್ಥಿರಾಸ್ತಿಗೆ ಸ್ವೀಕೃತಿ ನೀಡುವುದು.

2) ಶಿವಮೊಗ್ಗ ಮಹಾನಗರ ಪಾಲಿಕೆಯಿಂದ ಹಸ್ತಾಂತರಿಸಿದ ಎಲ್ಲಾ ಚರ ಮತ್ತು ಸ್ಥಿರ ಆಸ್ತಿಗಳನ್ನು ಶಿವಮೊಗ್ಗ ನಗರದ ಸಗಟು ಮತ್ತು ರೀಟೈಲ್ ನೀರು ಸರಬರಾಜು ನಿರ್ವಹಣೆಗೆ ಉಪಯೋಗಿಸತಕ್ಕದ್ದು. ಒಡಂಬಡಿಕೆಯಲ್ಲಿ ಅನುವು ಮಾಡಿರುವಂತೆ, ಬಳಕೆದಾರರಿಂದ ಬಾಕಿ ಇರುವ ನೀರಿನ ಕಂದಾಯ ವಸೂಲಿ ಮಾಡಲು ಮಹಾನಗರಪಾಲಿಕೆ ಒಪ್ಪಿಗೆ ನೀಡಲಾಗಿದ್ದು, ಮಂಡಳಿಯು ಬಿಲ್ಲಿಂಗ್, ಆದಾಯ ಸಂಗ್ರಹ ಮತ್ತು ಬಾಕಿ ನೀರಿನ ಕರವನ್ನು ಗ್ರಾಹಕರಿಂದ ಸಂಗ್ರಹಿಸತಕ್ಕದ್ದು.

3) ಗ್ರಾಹಕರು ಮಂಡಳಿಯಿಂದ ನೀರಿನ ಸಂಪರ್ಕ ಪಡೆಯಲು ನೀರಿನ ದರ, ಶುಲ್ಕ, ಠೇವಣಿ ಮತ್ತು ಇತರೆ ಅನ್ವಯಿಸಬಹುದಾದ ಯಾವುದೇ ರೀತಿ ಶುಲ್ಕವನ್ನು ಸಂಗ್ರಹಿಸಿ ಮಂಡಳಿ ಅಧೀನದಲ್ಲಿಟ್ಟುಕೊಳ್ಳಲು ಒಡಂಬಡಿಕೆಯಲ್ಲಿ ಅನುವು ಮಾಡಲಾಗಿದೆ.

4) ಮಹಾನಗರ ಪಾಲಿಕೆಯು ಮಂಡಳಿಗೆ ಹಾಲಿ ಇರುವ ಸಗಟು ಮತ್ತು ವಿತರಣಾ ವ್ಯವಸ್ಥೆ ತುರ್ತು ಕೆಲಸಗಳಿಗೆ ಹಾಗೂ ನೀರು ಸರಬರಾಜು ನಿರ್ವಹಣೆಗೆ ನಿಗಧಿತ ಅಥವಾ ನಿಗಧಿತವಲ್ಲದ ನಿರ್ವಹಣೆ ವೆಚ್ಚವನ್ನು ಭರಿಸಲು ಮಹಾನಗರ ಪಾಲಿಕೆಯು 4 ತಿಂಗಳ ಅವಧಿಗೆ ಬೇಕಾಗಬಹುದಾದ ರೂ:6.00 ಕೋಟಿ ಮೊತ್ತವನ್ನು ಮಂಡಳಿಗೆ ಠೇವಣಿ ರೂಪದಲ್ಲಿ ನೀಡಲು ಒಡಂಬಡಿಕೆಯಲ್ಲಿ ಅನುವು ಮಾಡಲಾಗಿದೆ.

5) ಶಿವಮೊಗ್ಗ ಮಹಾನಗರ ಪಾಲಿಕೆಯು ಹಾಗೂ ಮಂಡಳಿಯು ನೀರು ಸರಬರಾಜು ನಿರ್ವಹಣೆಗೆ ಸಂಬಂಧಿಸಿದ ಅಂದಾಜು ಪತ್ರವನ್ನು ಸಲ್ಲಿಸಿದ 15 ದಿನದೊಳಗೆ ಅನುಮೋದನೆ ನೀಡಲು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು. ಪಾಲಿಕೆವತಿಯಿಂದ ಉದ್ದೇಶಿತ ನಿರ್ವಹಣಾ ವೆಚ್ಚ ಅಂದಾಜನ್ನು ಅನುಮೋದನೆ ಮಾಡಲು ಸ್ವೀಕೃತಿಯಾದ 30 ದಿನಗಳೊಳಗೆ ಸಕಾರಾತ್ಮಕವಾಗಿ ಸ್ಪಂದಿಸದಿದ್ದರೆ, ಅಂದಾಜಿಗೆ ಸಮ್ಮತಿ ಇದೆಯೆಂದು ಭಾವಿಸಿ ಅದರಂತೆ ನಿರ್ವಹಣೆ ಮಾಡಲಾಗುವುದು. ನಿರ್ವಹಣಾ ಅಂದಾಜಿನ ಮೇಲೆ ಸಾಂದರ್ಭಿಕವಾಗಿ ಅವಶ್ಯಕತೆ ಕಂಡುಬಂದರೆ ಮಹಾನಗರ ಪಾಲಿಕೆಯ ಗಮನಕ್ಕೆ ತರದೇ, ಶೇ 15 ರವರೆಗೆ ಹೆಚ್ಚುವರಿಯಾಗಿ ವೆಚ್ಚ ಮಾಡಲು ಮಂಡಳಿಗೆ ಅಧಿಕಾರವಿರುತ್ತದೆ.

6) ಮಂಡಳಿಯು ಉತ್ತಮ ರೀತಿಯಲ್ಲಿ ನೀರು ಸರಬರಾಜು ವ್ಯವಸ್ಥೆಯ ಪಾಲನೆ ಮತ್ತು ನಿರ್ವಹಣೆ ಮಾಡಲು ಹೊಸದಾಗಿ ವಿಭಾಗ ಮತ್ತು ಉಪವಿಭಾಗ ಕಛೇರಿಗಳನ್ನು ತೆರೆಯಲು ಅನುಮತಿ ನೀಡಲಾಗಿದೆ.

7) ಮಹಾನಗರ ಪಾಲಿಕೆಯು ಮಂಡಳಿಯಿಂದ ನೀರಿನ ದರ ಹೆಚ್ಚಳದ ಪ್ರಸ್ತಾವನೆಯನ್ನು ಸಲ್ಲಿಸಿದ ನಂತರ ನಿಗಧಿತ ಸಮಯದೊಳಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು. ಇಲ್ಲದ ಪಕ್ಷದಲ್ಲಿ ಮಂಡಳಿಗೆ ಆಗಬಹುದಾದ ನಿರ್ವಹಣೆ ಹಾಗೂ ಇತರೆ ಹೆಚ್ಚಳವನ್ನು ಭರಿಸಲು ಪಾಲಿಕೆಯೇ ಜವಾಬ್ದಾರಿಯಾಗಿರುತ್ತದೆ.

8) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನೀರು ಸರಬರಾಜು ನಿಗಧಿತ ಹಾಗೂ ನಿಗಧಿತವಲ್ಲದ ನಿರ್ವಹಣಾ ವೆಚ್ಚವನ್ನು ಗ್ರಾಹಕರಿಂದ ಸಂಗ್ರಹ ಮಾಡಿದ ನೀರಿನ ಶುಲ್ಕದಿಂದ ಬರುವ ರೆವಿನ್ಯೂ ಆದಾಯಕ್ಕಿಂತ ಹೆಚ್ಚುವರಿಯಾದಾಗ ವ್ಯತ್ಯಾಸದ ಹಣವನ್ನು ನಗರಸಭೆಯೇ ಭರಿಸುವುದು. ಒಂದು ವೇಳೆ ಸದರಿ ಮೊತ್ತವನ್ನು ನಗರಪಾಲಿಕೆಯು ಭರಿಸಲು ವಿಫಲವಾದಲ್ಲಿ ಸದರಿ ಮೊತ್ತವನ್ನು ಸರ್ಕಾರವು ಸ್ಥಳೀಯ ಸಂಸ್ಥೆ/ಎಸ್.ಎಫ್.ಸಿ./ಕೇಂದ್ರ ಸರ್ಕಾರದ ಯಾವುದೇ ಅನುದಾನದಿಂದ ಕಡಿತಗೊಳಿಸುವುದಕ್ಕೆ ನಗರ ಸಭೆಯು ಒಪ್ಪಿದೆ.

9) ನೀರು ನಿರ್ವಹಣಾ ವ್ಯವಸ್ಥೆಯಡಿಯಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ನೌಕರರುಗಳು ನಗರಸಭೆಯಿಂದ ಅನ್ಯ ಸೇವೆಯ ಮೇಲೆ ನಿರ್ವಹಣಾ ಕಾರ್ಯವನ್ನು ಕ.ನ.ನೀಸ ಮತ್ತು ಒ.ಚ.ಮಂಡಳಿಯ ಅಧೀನದಲ್ಲಿ ಕಾರ್ಯ ನಿರ್ವಹಿಸುವುದು. ಸದರಿ ನೌಕರರ ಸಂಬಳವನ್ನು ಮತ್ತು ಇತರೆ ಕಾನೂನಿನಡಿ ಅನ್ವಯವಾಗುವ ಶಾಸನಬದ್ಧ ಋಣ ಮಂಡಳಿಯಿಂದಲೇ ಪ್ರತೀ ತಿಂಗಳೂ ನೀಡುವುದು. ಪ್ರಸ್ತುತ ಅಗತ್ಯವಿರುವ ತಾಂತ್ರಿಕ ಮತ್ತು ತಾಂತ್ರಿಕವಲ್ಲದ ಸಿಬ್ಬಂದಿಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಸುಸೂತ್ರ ನೀರು ಸರಬರಾಜು ನಿರ್ವಹಣೆಗೆ ನೇಮಿಸಿದ್ದಲ್ಲಿ ಸದರಿ ನೌಕರರನ್ನು ನಗರಸಭೆಯು ನೀರು ಸರಬರಾಜು ನಿರ್ವರ್ಹಣೆಯನ್ನು ಪುನ: ಹಿಂದಕ್ಕೆ ಪಡೆಯುವಾಗ ಎಲ್ಲಾ ನಿರ್ವಹಣೆ ಸಿಬ್ಬಂದಿಯೊಂದಿಗೆ ಹಿಂದಕ್ಕೆ ಪಡೆಯುವುದು. ನೀರು ಸರಬರಾಜು ನಿರ್ವಹಣೆಯನ್ನು ಹಿಂದಕ್ಕೆ ಪಡೆಯಲು ಮೂರು ತಿಂಗಳು ನೋಟೀಸ್ ನೀಡತಕ್ಕದ್ದು.

10) ಶಿವಮೊಗ್ಗ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಕೈಗೊಳ್ಳಬಹುದಾದ ಯಾವುದೆ ನೀರು ಸರಬರಾಜು ಯೋಜನೆ ಕಾಮಗಾರಿಗಳಿಗೆ ನಿಯಮಾನುಸಾರ ಸ್ಥಳೀಯ ಸಂಸ್ಥೆಯ ವತಿಯಿಂದ ಸಂದಾಯ ಮಾಡಬೇಕಾದ ಸಾಲದ ಕಂತು/ವಂತಿಕೆಯನ್ನು ಮಹಾನಗರಪಾಲಿಕೆವತಿಯಿಂದಲೇ ಸಂದಾಯ ಮಾಡಬೇಕಾಗುತ್ತದೆ. ನಿರ್ವಹಣಾ ಉಸ್ತುವಾರಿ ನೋಡಿಕೊಳ್ಳುವ ಮಂಡಳಿ ಈ ಸಂಬಂಧ ಜವಾಬ್ದಾರಿಯಾಗಿರುವುದಿಲ್ಲ.

11) ಶಿವಮೊಗ್ಗ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು ಅವಶ್ಯವಿರುವ ಮೂಲಭೂತ ಸೌಕರ್ಯ ಹಾಗೂ ಕಛೇರಿ ಕಟ್ಟಡವನ್ನು ಅವಶ್ಯವಿರುವ ಕಡೆ ಮಹಾನಗರ ಪಾಲಿಕೆವತಿಯಿಂದ ಒದಗಿಸುವುದು.

12) ನಿರ್ವಹಣೆ ಬಾಬ್ತು ಹೊರತುಪಡಿಸಿ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿಪಡಿಸಲು ವಿಶೇಷ ಅನುದಾನದಡಿಯಲ್ಲಿ ರಾಜ್ಯ ಸರ್ಕಾರ ಅಥವಾ ಇತರೆ ಯಾವುದೇ ಸ್ವತಂತ್ರ ಸಂಸ್ಥೆಯ ಮೂಲಕ ತೆಗೆದುಕೊಂಡಿರುವ ಯಾವುದೇ ಕಾಮಗಾರಿ ಹೊರತುಪಡಿಸಿ ಬೇರೆ ಕರಾರು ಒಪ್ಪಂದಕ್ಕೆ ಮಂಡಳಿ ಜವಾಬ್ದಾರಿ ಇರುವುದಿಲ್ಲ. ಪಾಲಿಕೆವತಿಯಿಂದ ಈಗಾಗಲೇ ಕೈಗೊಂಡಿರುವ ಕಾಮಗಾರಿಗಳನ್ನು ಪೂರ್ಣಗೊಳಿಸುವ ಜವಾಬ್ದಾರಿ ಪಾಲಿಕೆಯದಾಗಿರುತ್ತದೆ.

13) ಮಂಡಳಿಯು ಗ್ರಾಹಕರಿಂದ ಆಗಿಂದಾಗ್ಗೆ ಸಂಗ್ರಹವಾಗುವ ನೀರು ಪೂರೈಕೆ ಶುಲ್ಕದಿಂದ ಬರುವ ಆದಾಯದಲ್ಲಿ ನಿರ್ವಹಣಾ ವೆಚ್ಚವನ್ನು ಭರಿಸಲು ಸೂಕ್ತ ಕ್ರಮ ಕೈಗೊಳ್ಳಲಾಗುವುದು. ನೀರಿನ ಕಂದಾಯದ ಬಾಕಿ ವಸೂಲಾತಿಯಿಂದ ಬರುವ ಆದಾಯವನ್ನು ಮಂಡಳಿ ಮತ್ತು ಮಂಡಳಿಗೆ ಬರಬೇಕಾದ ಬಾಕಿ ಬಾಬ್ತುಗಳಿಗೆ ಜಮಾ ಮಾಡಿಕೊಳ್ಳಲಾಗುವುದು ಅಥವಾ ಮಹಾನಗರ ಪಾಲಿಕೆ ಜಂಟಿ ಖಾತೆಯಲ್ಲಿ (ಎಕ್ಸ್‌ಪ್ರೋ ಖಾತೆ) ಇರಿಸಿ, ಸದರಿ ಮೊತ್ತವನ್ನು ಮುಂಬರುವ ನಿರ್ವಹಣಾ ವೆಚ್ಚಕ್ಕೆ ಬಳಸಿಕೊಳ್ಳಬಹುದು. ಆಗಿಂದಾಗ್ಗೆ ಜಂಟಿ ಖಾತೆಯಲ್ಲಿರುವ ಮೊತ್ತವನ್ನು ಎರಡೂ ಸಂಸ್ಥೆಗಳು ಪರಾಮರ್ಶಿಸಿ ಹೊಂದಾಣಿಕೆ ಮಾಡಿಕೊಳ್ಳಬಹುದು. ಗ್ರಾಹಕರಿಂದ ಸಂಗ್ರಹವಾಗುವ ಒಟ್ಟು ರೆವಿನ್ಯೂ (ನೀರಿನ ಕಂದಾಯ) ದಲ್ಲಿ ಮಂಡಳಿಯಿಂದ ನಿರ್ವಹಣೆ ಮಾಡಲು ಶೇ.8 ರಷ್ಟು ಪ್ರೋತ್ಸಾಹಿತ ಶುಲ್ಕವನ್ನು ಮಂಡಳಿಯು ಕಾಯ್ದಿರಿಸಿಕೊಳ್ಳುವುದು.

14) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಪ್ಪಂದ ನಿವೇದನಾ ಪತ್ರಕ್ಕೆ ಸಹಿ ಮಾಡಿದ ಒಂದು ತಿಂಗಳೊಳಗೆ ನಿರ್ವಹಣೆಯ ನೀಲಿ ನಕ್ಷೆ ಅಥವಾ ಯೋಜನೆಯನ್ನು ತಯಾರಿಸಿ ಯೋಜನಾ ಉಸ್ತುವಾರಿ ಘಟಕಕ್ಕೆ (ಕ.ಒ.ಅ) ಪುನಃ ಪರಿಶೀಲನೆಗೆ ಹಾಗೂ ಅನುಮೋದನೆಗೆ ಸಲ್ಲಿಸಬೇಕು. ನಿರ್ವಹಣೆಯ ನೀಲಿ ನಕ್ಷೆ ಅಥವಾ ಯೋಜನೆಯಡಿ ಬರುವ ಸೇವಾ ಸೌಲಭ್ಯದ ಬಗ್ಗೆ ರೂಪುರೇಷೆಯನ್ನು ಹೊಂದಿದ್ದು, ಇತರೆ ವಿಷಯಗಳೊಂದಿಗೆ ಅದರಲ್ಲಿ ಬಟವಾಡೆಯ ಗುರಿ, ಹಣಕಾಸಿನ ಯೋಜನೆ, ಸಿಬ್ಬಂದಿಗಳ ಮಾದರಿ ಮತ್ತು ವ್ಯವಸ್ಥೆಯ ಪಾಲನೆ ಮತ್ತು ನಿರ್ವಹಣೆಯ ಬಗ್ಗೆ ಸೂಕ್ತ ಯೋಜನೆ, ಬಿಲ್ಲುಗಳ ತಯಾರಿಕೆ ಮತ್ತು ನೀರಿನ ಕರ ವಸೂಲಿ ಮಾಡಲು ಅನುಸರಿಸುವ ಕಾರ್ಯತಂತ್ರಗಳ ಬಗ್ಗೆ ವಿವರ ನೀಡುವುದು.

15) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನೀರಿನ ವ್ಯವಸ್ಥೆಯ ಬಗ್ಗೆ ಅಂಕಿ ಅಂಶಗಳ ಸಂಗ್ರಹಣೆ ಮತ್ತು ಅಭಿವೃದ್ಧಿ ಕುರಿತು ಮಾಹಿತಿ ಸಂಗ್ರಹಣೆ ವ್ಯವಸ್ಥೆಯನ್ನು ಹೊಂದಿರಬೇಕು.

16) ಶಿವಮೊಗ್ಗ ಮಹಾನಗರ ಪಾಲಿಕೆಯ ಪ್ರತಿನಿಧಿಯಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪಾಲನೆ ಮತ್ತು ನಿರ್ವಹಣೆಯನ್ನು ಸಗಟು ನೀರು ಸರಬರಾಜು ಮತ್ತು ನೀರು ವಿತರಣಾ ವ್ಯವಸ್ಥೆಯನ್ನು ಯೋಜನಾಬದ್ಧವಾಗಿ ಸಮರ್ಪಕವಾಗಿ ಉತ್ತಮ ರೀತಿಯಲ್ಲಿ ನಿರ್ವಹಣೆ ಮಾಡುವುದು.

17) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನೀರಿನ ಬಿಲ್ಲು ತಯಾರಿಸುವುದು ಮತ್ತು ನೀರಿನ ಕರ ವಸೂಲಿ, ಶುಲ್ಕ ಮತ್ತು ಬಾಡಿಗೆ ಠೇವಣಿ ಇತ್ಯಾದಿಗಳನ್ನು ಬಳಕೆದಾರರಿಂದ ವಸೂಲಿ ಮಾಡುವುದು.

18) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನೀರಿನ ಚಾಲನೆ ಮತ್ತು ನಿರ್ವಹಣೆಯ ಖರ್ಚು ವೆಚ್ಚಗಳನ್ನು ನಿರ್ವಹಿಸುವುದು ಹಾಗೂ ಪ್ರತಿ ತಿಂಗಳೂ ಈ ಲೆಕ್ಕಗಳ ಆಡಿಟ್ ಮಾಡಲು ಒಬ್ಬ ಸ್ವತಂತ್ರ ಚಾರ್ಟರ್ಡ್ ಅಕೌಂಟೆಂಟನ್ನು ಯಾವುದಾದರೂ ಒಂದು ಸಂಸ್ಥೆಯಿಂದ ನೇಮಿಸಿಕೊಂಡು ಲೆಕ್ಕ ತಪಾಸಣೆ ಮಾಡಿಸಿ, ಪ್ರತಿ ತಿಂಗಳೂ ನಡೆದ ಆಡಿಟ್ ಲೆಕ್ಕದ ತಪಾಸಣಾ ವರದಿಯ ಬಗ್ಗೆ ಮಾಹಿತಿಯನ್ನು ಮಹಾ ನಗರ ಪಾಲಿಕೆಗೆ ಒದಗಿಸುವುದು.

19) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಮುಂದಿನ ವಾರ್ಷಿಕ ಲೆಕ್ಕದ ಪ್ರಾರಂಭದ ಒಂದು ತಿಂಗಳ ಮುಂಚೆ ಒದಗಬಹುದಾದ ಖರ್ಚು ವೆಚ್ಚಗಳ ಹಾಗೂ ಬಾಧ್ಯತೆಗಳ ಬಗ್ಗೆ ಒಂದು ಅಂದಾಜನ್ನು ಸಲ್ಲಿಸತಕ್ಕದ್ದು. ಮೊದಲನೆಯ ಅಂತಹ ಅಂದಾಜು ಪ್ರತಿಯನ್ನು ಈ ಒಪ್ಪಂದ ಮಾಡಿಕೊಂಡ ಒಂದು ತಿಂಗಳೊಳಗಾಗಿ ಅನುಮೋದನೆಗಾಗಿ ಸಲ್ಲಿಸತಕ್ಕದ್ದು ಹಾಗೂ ಇದು ಹಾಲಿ ಚಾಲ್ತಿಯಲ್ಲಿರುವ ವಾರ್ಷಿಕ ಲೆಕ್ಕ ಅವಧಿಗೆ ಒಳಪಡತಕ್ಕದ್ದು.

20) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಮೂಲ ಸ್ಥಾವರದಿಂದ ಸಗಟು ನೀರು ಪೂರೈಕೆ ಹಾಗೂ ಗ್ರಾಹಕರಿಗೆ ವಿತರಣಾ ಜಾಲದ ಮೂಲಕ ನೀರು ಪೂರೈಕೆ ಮಾಡುವ ಹಾಗೂ ಸದರಿ ವ್ಯವಸ್ಥೆಯನ್ನು ಪಾಲನೆ ಮತ್ತು ನಿರ್ವಹಣೆ ಮಾಡಲು ಆಗುವ ದೈನಂದಿನ ವೆಚ್ಚ ಮತ್ತು ತುರ್ತು ಸಂದರ್ಭದಲ್ಲಿ ನಿರ್ವಹಿಸುವ ಕಾಮಗಾರಿಗಳಿಗೆ ಆಗುವ ವೆಚ್ಚವನ್ನು ಪಾವತಿಸುವುದು.

21) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಶಿವಮೊಗ್ಗ ಮಹಾನಗರ ಪಾಲಿಕೆಯೊಂದಿಗೆ ಸಮಾಲೋಚಿಸಿ ಮಂಡಳಿಗೆ ಚಾಲನೆ ಮತ್ತು ನಿರ್ವಹಣೆ ಕಾರ್ಯಕ್ಕಾಗಿ ಮಹಾನಗರಪಾಲಿಕೆಯಿಂದ ಒದಗಿಸಬಹುದಾದ ನೌಕರರ ಸಂಖ್ಯೆ ಕುರಿತು ಗುರುತಿಸುವುದು. ಈ ವಿಚಾರದಲ್ಲಿ ಗುರುತಿಸಲ್ಪಟ್ಟ ನೌಕರರ ಆಯ್ಕೆಯ ಕುರಿತು (ಕ.ಒ.ಅ) ನಿರ್ಧಾರವೇ ಅಂತಿಮವಾದುದು ಹಾಗೂ ಇದಕ್ಕೆ ಶಿವಮೊಗ್ಗ ಮಹಾನಗರಪಾಲಿಕೆ ಹಾಗೂ ಕನನೀಸ ಮತ್ತು ಒಳಚರಂಡಿ ಮಂಡಳಿಯು ಬದ್ದರಾಗಿರತಕ್ಕದ್ದು. ಅಂತಹ ನೌಕರರು ಮಂಡಳಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣದಲ್ಲಿರತಕ್ಕದ್ದು. ಮಂಡಳಿಯು ಪ್ರತಿ ತಿಂಗಳೂ ಇಂತಹ ನೌಕರರ ಹಾಜರಾತಿಯನ್ನು ಪರಶೀಲಿಸಿ ಕಳೆದ ತಿಂಗಳ ಹಾಜರಾತಿಯನ್ನು ಪ್ರತಿ ತಿಂಗಳ 5ನೇ ತಾರೀಖಿನೊಳಗಾಗಿ ಶಿವಮೊಗ್ಗ ಮಹಾನಗರಪಾಲಿಕೆಗೆ ಒದಗಿಸತಕ್ಕದ್ದು. ಈ ಯೋಜನೆಯಲ್ಲಿ ಕೆಲಸ ಮಾಡುತ್ತಿರುವ ಶಿವಮೊಗ್ಗ ಮಹಾನಗರಪಾಲಿಕೆಯ ನೌಕರರು ಕನನೀಸ ಮತ್ತು ಒಳಚರಂಡಿ ಮಂಡಳಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಶಿವಮೊಗ್ಗ ಮಹಾನಗರಪಾಲಿಕೆಯು ಇಂತಹ ನೌಕರರಿಗೆ ಪಾಲನೆ ಮತ್ತು ನಿರ್ವಹಣೆಗಾಗಿ ಕನನೀಸ ಮತ್ತು ಒಳಚರಂಡಿ ಮಂಡಳಿಯ ಪರಿವೀಕ್ಷಣೆ ಹಾಗೂ ನಿಯಂತ್ರಣದಲ್ಲಿದ್ದರೂ ಶಿವಮೊಗ್ಗ ಮಹಾನಗರಪಾಲಿಕೆಯು ಪ್ರಧಾನ ನಿಯೋಜಕರಾಗಿರುತ್ತಾರೆ ಹಾಗೂ ಇಂತಹ ಎಲ್ಲಾ ನಿಯೋಜಿತ ನೌಕರರಿಗೆ ಪ್ರತಿ ತಿಂಗಳು ಸಂಬಳ, ಭತ್ಯೆ ಮತ್ತು ಇತರೇ ಬಟವಾಡೆಗಳನ್ನು ಮಂಡಳಿವತಿಯಿಂದ ನಿಯಮಾನುಸಾರ ನಿರ್ವಹಣೆ ಮಾಡಿ ಎಲ್ಲಾ ನಿಯೋಜಿತ ನೌಕರರಿಗೆ ವೇತನ ನೀಡಲಾಗುವುದು. ಹಾಗೂ ಪಾಲಿಕೆ ಗಮನಕ್ಕೆ ತರುವುದು.

22) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯು ಅನಧಿಕೃತ ಸಂಪರ್ಕಗಳನ್ನು ಸಕ್ರಮಗೊಳಿಸಲು ಅಥವಾ ಸಂಪರ್ಕ ಕಡಿತಗೊಳಿಸಿ ಹಾಗೂ ಹೊಸದಾಗಿ ಸಂಪರ್ಕ ಕಲ್ಪಿಸುವ ಮೂಲಕ ಗೃಹ, ಗೃಹೇತರ ಮತ್ತು ಕೈಗಾರಿಕಾ ಉದ್ದೇಶಕ್ಕೆ ನೀರು ಸರಬರಾಜು ವ್ಯವಸ್ಥೆಯನ್ನು ಸಮರ್ಪಕವಾಗಿ ಅಭಿವೃದ್ಧಿ ಪಡಿಸಲು ನಿಯಾಮಾನುಸಾರ ಮಹಾನಗರಪಾಲಿಕೆ ಪರವಾಗಿ ಕಾನೂನಿನ ಪ್ರಕಾರ ಕ್ರಮ ಜರುಗಿಸಬಹುದು. ನೀರು ಸರಬರಾಜು ನಿರ್ವಹಣಾ ವ್ಯವಸ್ಥೆಯು ಅನುಮೋದನೆಯಾದ 12 ತಿಂಗಳೊಳಗಾಗಿ ಸದರಿ ಕಾರ್ಯದ ಗುರಿ ಮುಟ್ಟಲು ಹಂತ ಹಂತವಾಗಿ ಕೈಗೆತ್ತಿಕೊಳ್ಳಬಹುದಾಗಿದೆ.

23) ಶಿವಮೊಗ್ಗ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವ ಅರ್ಹ ಬಳಕೆದಾರರಿಗೆ ಸಮನಾಂತರವಾಗಿ ನೀರು ಪೂರೈಕೆ ಮಾಡಲು, ಹಾಲಿ ಇರುವ ಏರು/ವಿತರಣಾ ಕೊಳವೆ ಮಾರ್ಗಗಳಲ್ಲಿ ಯಾವುದೇ ತರಹದ ಅಧಿಕೃತ ಅಥವಾ ಅನಧಿಕೃತ ಸಂಪರ್ಕಗಳನ್ನು ಕಡಿತಗೊಳಿಸುವ ಮೂಲಕ ಆಯ್ದ ಬಳಕೆದಾರರಿಗೆ ನಿರಂತರ ನೀರು ಪೂರೈಕೆಯಾಗುವದನ್ನು ತಡೆಯಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಗೆ ಅಧಿಕಾರವಿರುತ್ತದೆ, ಸಾರ್ವಜನಿಕರಿಗೆ ಸಮರ್ಪಕವಾದ ನೀರು ಸರಬರಾಜು ಮಾಡಲು, ಸದರಿ ಕಾರ್ಯವನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯು ಕಾನೂನಿನ ಚೌಕಟ್ಟಿನಡಿಯಲ್ಲಿ ಕೈಗೆತ್ತಿಕೊಳ್ಳಬಹುದಾಗಿದೆ.

24) ಮಂಡಳಿಯು ನೀರಿನ ದರವನ್ನು ಹೆಚ್ಚಿಸಲು, ಶಿವಮೊಗ್ಗ ಮಹಾನಗರ ಪಾಲಿಕೆಯ ಪರಿಗಣನೆ ಮತ್ತು ಅನುಮೋದನೆಗೆ ಪ್ರಸ್ತಾವನೆಯನ್ನು ನೀಡಬಹುದು.

25) ಗ್ರಾಹಕರಿಗೆ ಗುಣಮಟ್ಟದ ನೀರು ಪೂರೈಕೆ ಮಾಡಲು ಮಂಡಳಿಯು ಯಾವುದೇ ನೂತನ ತಂತ್ರಜ್ಞಾನವನ್ನು ಕಾರ್ಯ ರೂಪಕ್ಕೆ ತರಬಹುದಾಗಿದೆ. ಹಾಗೂ ಬಿಲ್ಲು ತಯಾರಿಸಲು, ಕಂದಾಯ ವಸೂಲಾತಿ ಮಾಡಲು ಮತ್ತು ನೀರು ಸರಬರಾಜು ನಿರ್ವಹಣೆ ಚಟುವಟಿಕೆಗಳಿಗೆ ಅವಶ್ಯವಿರುವ ಹೊಸ ತಾಂತ್ರಿಕತೆಯನ್ನು ಅಳವಡಿಸಬಹುದಾಗಿದೆ.

26) ಗ್ರಾಹಕರು ಅಳವಡಿಸಿಕೊಂಡಿರುವ ನೀರಿನ ಸಂಪರ್ಕ ಮೀಟರ್‌ಗಳನ್ನು ಪರೀಕ್ಷಿಸುವ ಕೆಲಸ ಮಂಡಳಿಯ ಜವಬ್ದಾರಿಯಾಗಿದ್ದು, ಅದಕ್ಕೆ ತಗಲುವ ವೆಚ್ಚ ಅಥವಾ ಹೊಸದಾಗಿ ಪಡೆದುಕೊಳ್ಳುವ ಮೀಟರ್ ಸಹಿತ ಸಂಪರ್ಕ ಪಡೆಯಲು ತಗಲುವ ವೆಚ್ಚವನ್ನು ಗ್ರಾಹಕರೇ ಭರಿಸಬೇಕಾಗಿರುತ್ತದೆ.

27) ಗ್ರಾಹಕರ ಕುಂದು ಕೊರತೆ ನಿವಾರಣಾ ವ್ಯವಸ್ಥೆ ಮತ್ತು ಹಾಲಿ ಇರುವ ಸೇವೆಯನ್ನು ವಿಸ್ತೃತ ಗೊಳಿಸಬೇಕಾಗಿದ್ದು, ಮತ್ತು ಎಲ್ಲಾ ರೀತಿಯ ನೀರು ಸರಬರಾಜು ವ್ಯವಸ್ಥೆಯ ಬಿಲ್ಲಿಂಗ್ ಮತ್ತು ಕಂದಾಯ ವಸೂಲಾತಿಗೆ ಸಂಬಂಧಿಸಿದ ಗ್ರಾಹಕರ ಕುಂದು ಕೊರತೆಗಳನ್ನು ನಿವಾರಿಸುವ ಜವಾಬ್ದಾರಿ ಮಂಡಳಿಯದಾಗಿರುತ್ತದೆ.

28) ಕನನೀಸ ಮತ್ತು ಒಳಚರಂಡಿ ಮಂಡಳಿಯು ಚಾಲ್ತಿಯಲ್ಲಿರುವ /ಕಾಲಕಾಲಕ್ಕೆ ಒದಗಬಹುದಾದ ಕಾನೂನುಗಳನ್ನು ಪಾಲಿಸುವುದು ಮತ್ತು ದೇಶದ ಕಾನೂನಿನ ವ್ಯವಸ್ಥೆಗೆ ಅನುಗುಣವಾಗಿ ಶಿವಮೊಗ್ಗ ಮಹಾನಗರಪಾಲಿಕೆಯ ಸಹಕಾರದೊಂದಿಗೆ ಈ ವ್ಯವಹಾರವನ್ನು ನಡೆಸಲು ಶಿವಮೊಗ್ಗ ಮಹಾನಗರಪಾಲಿಕೆಯನ್ನು ಕೋರಿಕೊಳ್ಳತಕ್ಕದ್ದು.

29) ಕನನೀಸ ಮತ್ತು ಒಳಚರಂಡಿ ಮಂಡಳಿಯ ಮುಂದೆ ಈ ಒಡಂಬಡಿಕೆಯ ಒಪ್ಪಂದದ ಕಾಲಾವಧಿಯ ನಂತರ ಅಥವಾ ಒಪ್ಪಂದದ ಪ್ರಕಾರ ನಿರ್ಣಯಿಸಿದಲ್ಲಿ ಅಥವಾ ಬೇರೆ ರೀತಿಯಲ್ಲಿ ಹಸ್ತಾಂತರಿಸುವ ಪ್ರಕ್ರಿಯೆಗನುಗುಣವಾಗಿ ಎಲ್ಲಾ ಚರ ಹಾಗೂ ಸ್ಥಿರ ಆಸ್ತಿಗಳನ್ನು ಪಟ್ಟಿ ಮಾಡಿರುವಂತೆ ಶಿವಮೊಗ್ಗ ಮಹಾನಗರಪಾಲಿಕೆಗೆ ಹಿಂದಿರುಗಿಸತಕ್ಕದ್ದು ಮತ್ತು ಅಲ್ಲಿಂದ ಮುಂದೆ ಒಪ್ಪಂದದ ಮೇರೆಗೆ ಅಭಿವೃದ್ಧಿಗೊಳಿಸಲ್ಪಟ್ಟಿದ್ದು, ದುರಸ್ಥಿ ಮತ್ತು ನಿರ್ವಹಣೆಗೆ ಸಂಬಂಧಿಸಿದ ದಾಖಲೆಗಳು, ಬಿಲ್ಲು ತಯಾರಿಕೆ ಮತ್ತು ಕರ ವಸೂಲಿ ನಕ್ಷೆಗಳು, ಕೈಪಿಡಿಗಳು ಹಾಗೂ ವಿತರಣಾ ನಕ್ಷೆಗಳು, ದಾಖಲೆಗಳು, ಕಡತ ಮತ್ತು ದಾಖಲಾತಿ ಪುಸ್ತಕಗಳು ಮತ್ತು ಇತರೆ ಸಂಬಂಧಿಸಿದ ದಾಖಲೆಗಳು (ಈ ಒಪ್ಪಂದ ಚಾಲನೆಯಲ್ಲಿರುವ ಅವಧಿಯಲ್ಲಿ ಮಂಡಳಿಯ ಸುಪರ್ದಿಯಲ್ಲಿರತಕ್ಕದ್ದು ಇವುಗಳನ್ನು ಶಿವಮೊಗ್ಗ ಮಹಾನಗರಪಾಲಿಕೆಗೆ ಮುಂದಿನ ನಿರ್ವಹಣೆಗೆ ಹಸ್ತಾಂತರಿಸತಕ್ಕದ್ದು.

30) ನೀರು ಸರಬರಾಜು ವ್ಯವಸ್ಥೆಯಲ್ಲಿ ಅಳವಡಿಸಿರುವ ಎಲ್ಲಾ ವಿದ್ಯುಚ್ಛಕ್ತಿ ವೆಚ್ಚವನ್ನು ನಗರಸಭೆ ಭರಿಸತಕ್ಕದ್ದು.

ಈ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಕೂಡಲೇ ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ತತ್ಸಂಬಂಧವಾಗಿ ಈಗಾಗಲೇ ಉಭಯ ಸಂಸ್ಥೆಗಳು ಮಾಡಿಕೊಂಡ ಒಪ್ಪಂದದಂತೆ ಈ ಮೇಲಿನ ನಿಬಂಧನೆಗಳನ್ವಯ ತಕ್ಷಣವೆ ಮುಂದಿನ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 21**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ(ಖಜಾನೆ– II) ಹುದ್ದೆಯನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:** 1.ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 274 ಸಅಸೇ 2013, ದಿನಾಂಕ:15.04.2013.

2.ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 129 ಸಉಸೇ 2014, ದಿನಾಂಕ:20.05.2014.

3.ಆರ್ಥಿಕ ಇಲಾಖೆ, ಇವರ ಕಡತ ಸಂಖ್ಯೆ:ಆಇ/ಪ್ರಕಾ– ಖ– II/ ಎಲ್.ಎಂ.ಎಸ್.–8340/2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1)ರ ಸರ್ಕಾರಿ ಆದೇಶದಲ್ಲಿ ಎಲ್ಲಾ ಇಲಾಖೆಗಳ ಖರ್ಚು–ವೆಚ್ಚಗಳನ್ನೊಳಗೊಂಡ ಕ್ರೋಢೀಕೃತ ಆರ್ಥಿಕ ನಿರ್ವಹಣಾ ತಂತ್ರಾಂಶ " ಖಜಾನೆ– II "ನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಆರ್ಥಿಕ ಇಲಾಖೆಯಲ್ಲಿ ಪ್ರಧಾನ ಕಾರ್ಯದರ್ಶಿ, ಖಜಾನೆ– II, ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ(2)ರ ಸರ್ಕಾರಿ ಆದೇಶದಲ್ಲಿ, ದಿನಾಂಕ:20.05.2014ರಂದು ದಿನಾಂಕ:15.04.2014 ರಿಂದ ಒಂದು ವರ್ಷದ ಅವಧಿಗೆ ಪ್ರಧಾನ ಕಾರ್ಯದರ್ಶಿ, ಖಜಾನೆ–II, ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ(3)ರ ಆರ್ಥಿಕ ಇಲಾಖೆಯ ಕಡತದಲ್ಲಿ ಪ್ರಧಾನ ಕಾರ್ಯದರ್ಶಿ ಖಜಾನೆ–II, ಹುದ್ದೆಯಲ್ಲಿದ್ದ ಶ್ರೀ ಅಜಯಸೇಠ್, ಭಾ.ಆ.ಸೇ., ಅವರನ್ನು ವ್ಯವಸ್ಥಾಪಕ ನಿರ್ದೇಶಕರು, ಕೆ.ಬಿ.ಜೆ.ಎನ್.ಎಲ್. ಹುದ್ದೆಗೆ ವರ್ಗಾಯಿಸಿ ನೇಮಿಸಿರುವುದರಿಂದ ದಿನಾಂಕ:17.11.2014ರಿಂದ ಸರ್ಕಾರದ ಕಾರ್ಯದರ್ಶಿ, ಖಜಾನೆ– II, ಇವರು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಖಜಾನೆ– II, ಹುದ್ದೆಯ ಕಾರ್ಯ ವಹಿಸಿಕೊಂಡಿರುತ್ತಾರೆ. ಆದರೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಖಜಾನೆ–II, ಹುದ್ದೆಯನ್ನು ಮುಂದುವರೆಸುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ ಪ್ರಧಾನ ಕಾರ್ಯದರ್ಶಿ ಖಜಾನೆ–II, ಹುದ್ದೆಯನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 408 ಸಉಸೇ 2015, ಬೆಂಗಳೂರು, ದಿನಾಂಕ:27ನೇ ನವೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಖಜಾನೆ-II, ಹುದ್ದೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

PR. 02

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ)ಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 11 ಎಸ್‌ಜಿಬಿ 2000; ದಿನಾಂಕ: 14-03-2000.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಅಸೇ 2000; ದಿನಾಂಕ: 29-07-2000.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 07 ಸಸಿವಿ 2001; ದಿನಾಂಕ:20-03-2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2002; ದಿನಾಂಕ:06-01-2002.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001; ದಿನಾಂಕ:23-04-2002.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001; ದಿನಾಂಕ:12-08-2002
7. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 309 ಸಉಸೇ 2014; ದಿನಾಂಕ:30.09.2014.
8. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಯ ಸಿಆಸುಇ 674 ಲೆಪ-ಐಆರ್‌ಎಲ್‌ಎ 2014.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:14-03-2000ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ, ಭತ್ಯೆ ಹಾಗೂ ಇತರೆ ಕ್ಲೇಮ್‌ಗಳನ್ನು ಪರಿಶೀಲಿಸಿ ಪಾವತಿಸುವ ಸಲುವಾಗಿ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 01 |
| 3. | ಅಕೌಂಟ್ಸ್ ಅಸಿಸ್ಟೆಂಟ್ | 01 |
| 4. | ಸಹಾಯಕರು | 02 |
| 5. | ಕಿರಿಯ ಸಹಾಯಕ | 01 |
| 6. | ಶೀಘ್ರಲಿಪಿಗಾರ | 01 |
| 7. | ಕ್ಯಾಷಿಯರ್ | 01 |
| 8. | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 9. | ದಲಾಯತ್ | 01 |

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:29-07-2000ರ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(5) ರಲ್ಲಿ ಓದಲಾದ ದಿನಾಂಕ:23-04-2002ರ ಆದೇಶದಲ್ಲಿ ಸಿಆಸು ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಗೆ ಹೆಚ್ಚುವರಿಯಾಗಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| ಅ. | ಡಾಟಾ ಎಂಟ್ರಿ ಆಪರೇಟರ್ | 01 ಹುದ್ದೆ |
| ಆ. | ಸಹಾಯಕ | 01 ಹುದ್ದೆ |
| ಇ. | ಬೆರಳಚ್ಚುಗಾರರು | 01 ಹುದ್ದೆ |

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ:12–08–2002ರ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ(7) ರಲ್ಲಿ ಓದಲಾದ ದಿನಾಂಕ:30–10–2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯೆಂದು ಮರು ಪದನಾಮೀಕರಿಸಲಾಗಿದೆ. ಮುಂದುವರೆದು ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗುತ್ತಿದೆ. ಕ್ರಮಸಂಖ್ಯೆ(7)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ:15.03.2014 ರಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿರುತ್ತದೆ.

ಮೇಲೆ (8)ರಲ್ಲಿ ಓದಲಾದ ಕಡತದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–ಐಆರ್ಎಲ್ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:15–03–2014 ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಹಾಗೂ ಸದರಿ 15 ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2 | ಶಾಖಾಧಿಕಾರಿ | 01 |
| 3 | ತಾಂತ್ರಿಕ ಸಹಾಯಕರು/ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 01 |
| 4 | ಹಿರಿಯ ಸಹಾಯಕ | 01 |
| 5 | ಸಹಾಯಕರು | 03 |
| 6 | ಕಿರಿಯ ಸಹಾಯಕ | 01 |
| 7 | ಶೀಘ್ರಲಿಪಿಗಾರ | 01 |
| 8 | ಕ್ಯಾಷಿಯರ್ | 01 |
| 9 | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 |
| 10 | ಡಾಟಾ ಎಂಟ್ರಿ ಆಪರೇಟರ್ | 01 |
| 11 | ಬೆರಳಚ್ಚುಗಾರರು | 01 |
| 12 | ದಲಾಯತ್ (ದಲಾಯತ್–1+ಆಫೀಸ್ ಆರ್ಡರ್ಲಿ–1) | 02 |
| | **ಒಟ್ಟು** | **15 ಹುದ್ದೆಗಳು** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 309 ಸಲುಸೇ 2014, ಬೆಂಗಳೂರು, ದಿನಾಂಕ:03ನೇ ಡಿಸೆಂಬರ್, 2015**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–ಐಆರ್ಎಲ್ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:15–03–2015ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2 | ಶಾಖಾಧಿಕಾರಿ | 01 |
| 3 | ತಾಂತ್ರಿಕ ಸಹಾಯಕರು/ವಿಶೇಷಾಧಿಕಾರಿ(ವೇತನ ಶ್ರೇಣಿ ರಹಿತ ಹುದ್ದೆ) | 01 |
| 4 | ಹಿರಿಯ ಸಹಾಯಕ | 01 |
| 5 | ಸಹಾಯಕರು | 03 |
| 6 | ಕಿರಿಯ ಸಹಾಯಕ | 01 |
| 7 | ಶೀಘ್ರಲಿಪಿಗಾರ | 01 |
| 8 | ಕ್ಯಾಷಿಯರ್ | 01 |
| 9 | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 |
| 10 | ಡಾಟಾ ಎಂಟ್ರಿ ಆಪರೇಟರ್ | 01 |
| 11 | ಬೆರಳಚ್ಚುಗಾರರು | 01 |
| 12 | ದಲಾಯತ್ (ದಲಾಯತ್–1+ಆಫೀಸ್ ಆರ್ಡರ್ಲಿ–1) | 02 |
| | **ಒಟ್ಟು** | **15 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

PR. 03

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯ ಕ್ಷೇತ್ರಾಧಿಕಾರಿಗಳಿಗೆ ವಿತ್ತೀಯ ಪ್ರತ್ಯಾಧಿಕಾರ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ತೋಇ 103 ರೇಕೃವಿ 2013, ದಿನಾಂಕ: 05.09.2013.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಯೋ/ಪಿಎಸ್.3/ಆಪ್ರತ್ಯಾ/26/2014–15, ದಿನಾಂಕ: 05/09/12/2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 05.09.2013ರ ಆದೇಶದಲ್ಲಿ, ಮೈಸೂರು ಆರ್ಥಿಕ ಅಧಿಕಾರಿಗಳ ಕೈಪಿಡಿಯ ನಿಯಮ 5ರಲ್ಲಿ ಯಾವುದೇ ಪ್ರಾಧಿಕಾರವು ತನಗೆ ನೀಡಿದ ಅಧಿಕಾರವನ್ನು ಇತರೇ ಪ್ರಾಧಿಕಾರಕ್ಕೆ ಅಥವಾ ಕೆಳಗಿನ ಅಧಿಕಾರಿಗಳಿಗೆ ನೀಡಲು ಅವಕಾಶವಿರುವುದಿಲ್ಲ ಮತ್ತು ಸರ್ಕಾರ ಮಾತ್ರ ಅಂತಹ ಅಧಿಕಾರವನ್ನು ಪ್ರತ್ಯಾಯೋಜಿಸಬಹುದಾಗಿರುತ್ತದೆ. ಆದ್ದರಿಂದ, ವಿಕೇಂದ್ರಿಕರಣ ಮತ್ತು ಆರ್ಥಿಕ ಪ್ರತ್ಯಾಯೋಜನೆಯನ್ನು ನೀಡಿ ಇಲಾಖೆಯ ಕ್ಷೇತ್ರಾಧಿಕಾರಿಗಳಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಹೊರಡಿಸಿರುವ ನಡವಳಿಗಳನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮತ್ತು ಉತ್ಪಾದಕತೆ ಮತ್ತು ಗುಣಮಟ್ಟದ ಆಧಾರದ ಮೇಲೆ ಗೂಡಿಗೆ ಪ್ರೋತ್ಸಾಹಧನ ಇವುಗಳಿಗೆ ಸಂಬಂಧಿಸಿದಂತೆ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ನು ರೇಷ್ಮೆ ಸಹಾಯಕ ನಿರ್ದೇಶಕರ ಮಟ್ಟದವರೆಗೆ ಮಾತ್ರ ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: (2)ರ ದಿನಾಂಕ: 05/09–12–2014ರ ಪತ್ರದಲ್ಲಿ 12ನೇ ಪಂಚವಾರ್ಷಿಕ–ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ ಘಟಕ ದರ, ಸಹಾಯಧನ ದರಗಳು ಹೆಚ್ಚಳವಾಗಿರುವುದಲ್ಲದೇ 2014–15ನೇ ಸಾಲಿನಿಂದ ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆಯಡಿ ಸಹಾಯಧನ ನೀಡಿಕೆ ಘಟಕ ದರದ ಶೇಕಡ 90ಕ್ಕೆ ಹೆಚ್ಚಳವಾಗಿರುತ್ತದೆ. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕ್ಷೇತ್ರಮಟ್ಟದಲ್ಲಿ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಸಹಾಯಧನ ಮಂಜೂರಾತಿ ಕುರಿತಂತೆ ಕ್ಷೇತ್ರಮಟ್ಟದ ಅಧಿಕಾರಿಗಳ ಘಟಕ ದರ ಸಹಾಯಧನ ಹೆಚ್ಚಳವಾಗಿರುವುದರಿಂದ ಕ್ಷೇತ್ರಮಟ್ಟದಲ್ಲಿ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಅನುಷ್ಠಾನ ಮಾಡಲು ಆಗದೆ ಇರುವುದನ್ನು ಗಮನಿಸಿರುವುದಾಗಿ ರೇಷ್ಮೆ ಆಯುಕ್ತರು ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುತ್ತಾರೆ. ಹಾಲಿ ಇರುವ ಆರ್ಥಿಕ ಪ್ರತ್ಯಾಯೋಜನೆ ₹.1,50,000 ಲಕ್ಷದವರೆಗೆ ಮಾತ್ರ ಸಹಾಯಧನ ಮಂಜೂರಾತಿಗಾಗಿ ರೇಷ್ಮೆ ಜಂಟಿ ನಿರ್ದೇಶಕರಿಗೆ ಪ್ರತ್ಯಾಧಿಕಾರವಿದ್ದು ಇದಕ್ಕೆ ಮೀರಿದ ಪ್ರಸ್ತಾವನೆಗಳು ಮಂಜೂರಾತಿಗಾಗಿ ರೇಷ್ಮೆ ನಿರ್ದೇಶನಾಲಯಕ್ಕೆ ಬರಬೇಕಾಗಿದ್ದು, ಪ್ರಸ್ತಾವನೆಗಳಿಗೆ ಮಂಜೂರಾತಿ ನೀಡಿ ಫಲಾನುಭವಿಗಳಿಗೆ ಸಹಾಯಧನ ಒದಗಿಸಲು ವಿಳಂಬವಾಗುತ್ತದೆ. ಸಹಾಯಧನ ನೀಡಿಕೆಯಲ್ಲಿ ವಿಳಂಬವಾದಲ್ಲಿ ಫಲಾನುಭವಿಗಳು ಇತರೆ ಬೆಳೆಗಳ ಕಡೆಗೆ ಒಲವು ತೋರಿಸುತ್ತಾರೆ. ಇದರಿಂದ ನಿಗಧಿತ ಸಮಯದಲ್ಲಿ ಕಾರ್ಯಕ್ರಮ ಅನುಷ್ಠಾನ ಮಾಡಲು ತೊಂದರೆಯಾಗುವುದಲ್ಲದೆ, ನೇರವಾಗಿ ರಾಜ್ಯದ ರೇಷ್ಮೆ ಉತ್ಪಾದನೆಗೆ ಹಿನ್ನಡೆಯಾಗುತ್ತದೆ. ಆದ್ದರಿಂದ, ಸರ್ಕಾರದ ಆದೇಶ ಸಂಖ್ಯೆ: ತೋಇ 103 ರೇಕೃವಿ 2013, ದಿನಾಂಕ: 05.09.2013ರಲ್ಲಿ ನೀಡಿರುವ ವಿತ್ತೀಯ ಪ್ರಾಧಿಕಾರಗಳನ್ನು ಹೆಚ್ಚಿಸಿ ನೀಡಬೇಕಾಗಿರುವುದು ಅವಶ್ಯಕವಾಗಿರುವುದರಿಂದ ಈ ಕೆಳಕಂಡಂತೆ ಕ್ಷೇತ್ರಮಟ್ಟದ ಅಧಿಕಾರಿಗಳಿಗೆ ವಿತ್ತೀಯ ಪ್ರತ್ಯಾಧಿಕಾರವನ್ನು ಹೆಚ್ಚಿಸಿ ಪರಿಷ್ಕರಿಸಬೇಕಾಗಿದೆ. ಪರಿಷ್ಕೃತ ವಿತ್ತೀಯ ಪ್ರತ್ಯಾಯೋಜನೆಯ ಆದೇಶದ ನಿರೀಕ್ಷೆಯಲ್ಲಿ ಕೆಳಕಂಡ ಪ್ರತ್ಯಾಯೋಜನೆಯಂತೆ ಕಾರ್ಯಕ್ರಮಗಳನ್ನು ಕ್ಷೇತ್ರಮಟ್ಟದಲ್ಲಿ ಅನುಷ್ಠಾನ ಮಾಡಲು ಸಂಬಂಧಿತ ರೇಷ್ಮೆ ಜಂಟಿ ನಿರ್ದೇಶಕರು/ರೇಷ್ಮೆ ಉಪ ನಿರ್ದೇಶಕರುಗಳಿಗೆ ಕ್ರಮವಹಿಸಲು ಅನುಮತಿ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

| ಕ್ರಮ ಸಂಖ್ಯೆ: | ಕಾರ್ಯಕ್ರಮದ ವಿವರ | ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು | ಪ್ರಸ್ತುತ ಪ್ರತ್ಯಾಯೋಜನೆ | | | | | |
|---|---|---|---|---|---|---|---|---|
| | | | ರೇಷ್ಮೆ ಜಂಟಿ ನಿರ್ದೇಶಕರು | | ರೇಷ್ಮೆ ಉಪ ನಿರ್ದೇಶಕರು | | ರೇಷ್ಮೆ ವಿಸ್ತರಣಾಧಿಕಾರಿಗಳು | |
| | | | ಪ್ರಸ್ತುತ | ಪ್ರಸ್ತಾಪಿತ | ಪ್ರಸ್ತುತ | ಪ್ರಸ್ತಾಪಿತ | ಪ್ರಸ್ತುತ | ಪ್ರಸ್ತಾಪಿತ |
| 1 | ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ ಪ್ರೋತ್ಸಾಹಧನ | Full Powers | (ಪ್ರತಿ ಪ್ರಕರಣಕ್ಕೆ) ₹. 75.001 ರಿಂದ ₹. 150000 ರವರೆಗೆ | (ಪ್ರತಿ ಪ್ರಕರಣಕ್ಕೆ) ₹. 1,00,000 ರಿಂದ ₹. 2,50,000 ರವರೆಗೆ | (ಪ್ರತಿ ಪ್ರಕರಣಕ್ಕೆ) ₹.25.001 ರಿಂದ ₹.75.000ರವರೆಗೆ | (ಪ್ರತಿ ಪ್ರಕರಣಕ್ಕೆ) ₹.25.001 ರಿಂದ ₹.1,00,000 ರವರೆಗೆ | (ಪ್ರತಿ ಪ್ರಕರಣಕ್ಕೆ) ₹.25,000 ರವರೆಗೆ | (ಪ್ರತಿ ಪ್ರಕರಣಕ್ಕೆ) ₹.25,000 ರವರೆಗೆ |

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ: ತೋಇ 103 ರೇಕೃವಿ 2013, ದಿನಾಂಕ: 05.09.2013ರಲ್ಲಿ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮಂಜೂರು ಮಾಡಲು ರೇಷ್ಮೆ ಇಲಾಖೆಯ ಅಧಿಕಾರಿಗಳಿಗೆ ನೀಡಿರುವ ಆರ್ಥಿಕ ಅಧಿಕಾರವನ್ನು ಪರಿಷ್ಕರಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 283 ರೇಕೃವಿ 2014, ಬೆಂಗಳೂರು, ದಿನಾಂಕ: 30.10.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ತೋಇ 103 ರೇಕೃವಿ 2013, ದಿನಾಂಕ: 05.09.2013ರಲ್ಲಿ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮಂಜೂರು ಮಾಡಲು ರೇಷ್ಮೆ ಇಲಾಖೆಯ ಅಧಿಕಾರಿಗಳಿಗೆ ನೀಡಿರುವ ಅಧಿಕಾರವನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಸರ್ಕಾರವು ಆದೇಶಿಸಿದೆ.

| ಕ್ರ.ಸಂ. | ಕಾರ್ಯಕ್ರಮದ ವಿವರ | ಪ್ರಸ್ತಾಪಿತ ಪ್ರತ್ಯಾಯೋಜನೆ | | | |
|---|---|---|---|---|---|
| | | ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು | ರೇಷ್ಮೆ ಜಂಟಿ ನಿರ್ದೇಶಕರು | ರೇಷ್ಮೆ ಉಪ ನಿರ್ದೇಶಕರು | ರೇಷ್ಮೆ ಸಹಾಯಕ ನಿರ್ದೇಶಕರು |
| 1 | ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮಂಜೂರಾತಿ | ಪೂರ್ಣ ಅಧಿಕಾರ | ₹. 1,00,000 ರಿಂದ ₹. 2,50,000ರವರೆಗೆ (ಪ್ರತಿ ಪ್ರಕರಣಕ್ಕೆ) | ₹.25,001 ರಿಂದ ₹.1,00,000 ರವರೆಗೆ (ಪ್ರತಿ ಪ್ರಕರಣಕ್ಕೆ) | ₹. 25,000ರವರೆಗೆ (ಪ್ರತಿ ಪ್ರಕರಣಕ್ಕೆ) |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 07 ವೆಚ್ಚ–4/2015, ದಿನಾಂಕ: 13.10.2015ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಲ್.ಚಿನ್ನಮ್ಮ**

PR. 659 ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ)

SC.100 ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ 02/03/2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ಕೋರ್ಟ್ ಸಂಕೀರ್ಣದಲ್ಲಿ ಪೊಲೀಸರು, ವಕೀಲರು ಮತ್ತು ಮಾಧ್ಯಮದವರುಗಳ ನಡುವೆ ನಡೆದ ಘರ್ಷಣೆ ಪ್ರಕರಣಕ್ಕೆ ಸಂಬಂಧಿಸಿದಂತೆ ವಾದ ಮಂಡಿಸಿದ ವಕೀಲರುಗಳಿಗೆ ಸಂಭಾವನೆ ನೀಡಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ಬೆಂಗಳೂರು, ದಿನಾಂಕ 27/01/2012.
2. ಡಿಜಿ ಮತ್ತು ಐಜಿಪಿರವರ ಪತ್ರ ಸಂ:ಸಿಬಿ(5)144/2014–15, ದಿನಾಂಕ 23/06/2015.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ಆದೇಶದಲ್ಲಿ ಎಲ್ಲಾ ತರಹದ ವಿಚಾರಣಾ ಆಯೋಗಗಳು, ನ್ಯಾಯ ಮಂಡಳಿಗಳು ಮತ್ತು ನ್ಯಾಯಾಲಯಗಳ ಮುಂದೆ ಸರ್ಕಾರ/ಇಲಾಖಾ ಮುಖ್ಯಸ್ಥರ ಪರವಾಗಿ ವಾದ ಮಂಡಿಸಲು ಖಾಸಗಿ ವಕೀಲರ ಸೇವೆಯನ್ನು ಬಳಸಿಕೊಂಡಲ್ಲಿ, ಅಂತಹ ಪ್ರಕರಣಗಳಲ್ಲಿ ಕಾನೂನು ಇಲಾಖೆಯ ಪೂರ್ವಾನುಮತಿಯನ್ನು ಪಡೆಯುವ ಷರತ್ತಿಗೆ ಒಳಪಟ್ಟು ಸಂಭಾವನೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ. ಆದರೆ ಕ್ಲೇಮುಗಳನ್ನು ನಿಗಧಿ ಮಾಡುವಾಗ ಸರ್ಕಾರಿ ವಕೀಲರಿಗೆ ಅನ್ವಯವಾಗುವ ಶುಲ್ಕವನ್ನು ಉಲ್ಲೇಖವಾಗಿ ತೆಗೆದುಕೊಳ್ಳಬೇಕು. ಹಾಗೆಯೇ ಕ್ಲೇಮುಗಳ ಮೊತ್ತವು ಹೆಚ್ಚೆಂದು ಕಂಡುಬರುವ ಪ್ರಕರಣಗಳಲ್ಲಿ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗೆ ಅಂತಹ ಹೆಚ್ಚುವರಿ ಮೊತ್ತದ ಕ್ಲೇಮುಗಳ ಸೂಕ್ತತೆಯ ಬಗ್ಗೆ ತೃಪ್ತಿಕರವಾಗಿದೆಯೆಂದು ಮನವರಿಕೆಯಾಗಿರಬೇಕೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ(2)ರ ಪತ್ರದಲ್ಲಿ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ದಿನಾಂಕ 02/03/2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ನಡೆದ ಘಟನೆಯ ಪ್ರಕರಣದಲ್ಲಿ ಪೊಲೀಸರ ಪರವಾಗಿ ಸಿ.ಬಿ.ಐ. ವಿಚಾರಣೆಯಲ್ಲಿ ವಾದ ಮಂಡಿಸಲು (1) ಶ್ರೀ ಎಸ್.ವಿಜಯಶಂಕರ್, (2) ಶ್ರೀ ಜಿ.ಕೆ.ಬೇಕಲ್, (3) ಶ್ರೀ ಪಿ.ವಿ.ರವೀಂದ್ರನಾಥ್, (4) ಶ್ರೀ ಆರ್.ನಿತಿನ್ ಇವರನ್ನು ನೇಮಿಸಿ, ಸಂಭಾವನೆ ನಿಗಧಿಪಡಿಸಿ, ಸಂಭಾವನೆ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2055–00–003–0–01–015" (ಎನ್‌ಪಿ)** ಅಡಿಯಲ್ಲಿ ಭರಿಸಲು ಮಂಜೂರಾತಿ ಆದೇಶ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ಕಾನೂನು ಇಲಾಖೆಯನ್ನು ಸಂಪರ್ಕಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 16 ಪಿಸಿಇ 2013(ಭಾಗ 1), ಬೆಂಗಳೂರು ದಿನಾಂಕ: 10/09/2015**

ಕಾನೂನು ಇಲಾಖೆಯ ಸಮಾಲೋಚನೆಯೊಂದಿಗೆ ದಿನಾಂಕ:02/03/2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ನಡೆದ ಪ್ರಕರಣವನ್ನು ಸಿಬಿಐ ರವರೊಡನೆ ವಿಚಾರಣೆ ಮಾಡಲಾಗುತ್ತಿದ್ದು, ಈ ವಿಚಾರಣೆಯಲ್ಲಿ ಪೊಲೀಸ್ ಅಧಿಕಾರಿ/ಸಿಬ್ಬಂದಿಯವರ ಪರವಾಗಿ ವಾದ ಮಂಡಿಸಿದ/ಮಂಡಿಸಲಿರುವ ಈ ಕೆಳಕಂಡ ವಕೀಲರುಗಳನ್ನು ನೇಮಿಸಿದೆ. ಹಾಗೂ ಅವರ ಹೆಸರಿನ ಮುಂದೆ ನಮೂದಿಸಿರುವ ಪ್ರಮಾಣದಲ್ಲಿ ಸಂಭಾವನೆಯನ್ನು ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

| | | | |
|---|---|---|---|
| 1. | ಶ್ರೀ ಎಸ್.ವಿಜಯಶಂಕರ್, ಹಿರಿಯ ವಕೀಲರು | Reading Fee ₹.1,10,000.00 | For each Court appearance ₹. 2,20,000/- |
| 2. | ಶ್ರೀ ಜಿ.ಕೆ.ಬೇಕಲ್, ವಕೀಲರು | Reading Fee ₹.1,00,000.00 | ₹. 60,000/- (Per month) |
| 3. | ಶ್ರೀ ಪಿ.ವಿ.ರವೀಂದ್ರನಾಥ್, ವಕೀಲರು | Professional Charges ₹. 1,00,000.00 | |
| 4. | ಶ್ರೀ ಆರ್.ನಿತಿನ್, ವಕೀಲರು | Reading Fee ₹.1,00,000.00 | For each Court appearance ₹. 50,000/- |

ಮಾನ್ಯ ಹೈಕೋರ್ಟ್/ಸಿಬಿಐ ನ್ಯಾಯಾಲಯಗಳಿಗೆ ಹಾಜರಾಗಿ ವಾದ ಮಂಡಿಸಿರುವ/ಮಂಡಿಸಲಾಗುವ ಈ ಮೇಲ್ಕಂಡ ವಕೀಲರುಗಳಿಗೆ ನೀಡಬೇಕಾಗಿರುವ ಒಟ್ಟು ವೆಚ್ಚ ₹. 38,10,000/– (ರೂಪಾಯಿ ಮೂವತ್ತೆಂಟು ಲಕ್ಷದ ಹತ್ತುಸಾವಿರ ಮಾತ್ರ) [**ಇಲ್ಲಿಯವರೆಗೂ ನೀಡಬೇಕಾದ ಒಟ್ಟು ವೆಚ್ಚ ಮತ್ತು ಸಂಭವನೀಯ ವೆಚ್ಚ ಸಹ**] ಗಳಿಗೆ ಲೆಕ್ಕ ಶೀರ್ಷಿಕೆ **"2055–00–003–0–01–015"** (ಎನ್‌ಪಿ) ಅಡಿಯಲ್ಲಿ ಭರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ ಹಾಗೂ ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು, ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ಜಂಟಿ ನಿಯಂತ್ರಕರು(ಹಣಕಾಸು), ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಕಾಇ 3195 ಪ್ರಕಾ 2015, ದಿನಾಂಕ 31/07/2015ರಲ್ಲಿ ನೀಡಿರುವ ಸಹಮತ ಹಾಗೂ ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್.ಜೋಗೋಜಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)

**PR. 600**

**SC.50**

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ / ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ 29.04.2015, 18.05.2015, 01.06.2015(TA), 04.06.2015, 01.07.2015, 03.08.2015 ಮತ್ತು 01.09.2015.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4 ದಿನಾಂಕ: 22.06.2015(TA), 21.07.2015(TA), 25.08.2015(TA) ಮತ್ತು 23.09.2015(TA)
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ದಿನಾಂಕ 22.06.2015.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ:01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ / ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ₹. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹. 106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹. 53.28 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ₹. 53.26 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹.7197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ ಸೆಪ್ಟೆಂಬರ್ 2015ರವರೆಗೆ ಸಹಾಯಧನ ₹.2,982.77 ಕೋಟಿಗಳನ್ನು ಬಿಡುಗಡೆ ಮಾಡಿದೆ.

   ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ₹.443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.46.41 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ₹.397.08 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

   2014–15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 49.65 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ₹.358.91 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹. 375.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟಿರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ₹. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣೆ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015 ದಿನಾಂಕ 28.07.2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹. 7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹. 2,982.77 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

ರೂ ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು. | 2350.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಬಾಬ್ತು. | 46.41 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು. | 49.65 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 53.28 |
| ತ್ರಿಪಕ್ಷೀಯ ಹೊಂದಾಣಿಕೆ – ಏಪ್ರಿಲ್ 2015ರಿಂದ ಆಗಸ್ಟ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 481.43 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| ಸೆಪ್ಟೆಂಬರ್ 2015ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | **2982.77** |

7. ಅಕ್ಟೋಬರ್ 2015ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

₹. ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಅಕ್ಟೋಬರ್ 2015ರ ಮಾಹೆಗೆ ಒಟ್ಟು ಬಿಡುಗಡೆ | 399.89 |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ 15.10.2015**

1. ಸರ್ಕಾರವು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಅಕ್ಟೋಬರ್ 2015ರ ಮಾಹೆಗೆ ₹. 375.00 ಕೋಟಿಗಳ (₹. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ)ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ಅಕ್ಟೋಬರ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 36.5 | 5.5 | 42.00 |
| ಮವಿಕಂ | 24.25 | 0.75 | 25.00 |
| ಹುವಿಕಂ | 141.00 | 10.00 | 151.00 |

| | | | |
|---|---|---|---|
| ಗುವಿಕಂ | 77.50 | 9.50 | 87.00 |
| ಚಾವಿಸನಿನಿ | 59.50 | 5.50 | 65.00 |
| ಹು.ಗ್ರಾ.ಸ.ಸಂ | 5.00 | 0.00 | 5.00 |
| **ಒಟ್ಟು** | **343.75** | **31.25** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು ಕ್ರಮವಾಗಿ ₹. 9.00 ಕೋಟಿ ಹಾಗೂ ₹.7.01 ಕೋಟಿಗಳನ್ನು ಅಕ್ಟೋಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು |
|---|---|---|---|
| ಬೆವಿಕಂ | 1.38 | 1.25 | **2.63** |
| ಮವಿಕಂ | 1.25 | 0.49 | **1.74** |
| ಹುವಿಕಂ | 0.00 | 2.83 | **2.83** |
| ಗುವಿಕಂ | 3.77 | 1.31 | **5.08** |
| ಚಾವಿಸನಿನಿ | 2.60 | 1.13 | **3.73** |
| **ಒಟ್ಟು** | **9.00** | **7.01** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ₹. 8.88 ಕೋಟಿಗಳನ್ನು ಅಕ್ಟೋಬರ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | ಒಟ್ಟು |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಅಕ್ಟೋಬರ್ 2015ರ ಮಾಹೆಗೆ ಸಹಾಯಧನ ಬಿಡುಗಡೆ | | | ಅಕ್ಟೋಬರ್ –2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ಕು.ಜ್ಯೋ ಬಾಕಿ ಮನ್ನಾ ಬಾಬ್ತು ಅಕ್ಟೋಬರ್ 2015 ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂ ಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 42.00 | 0.00 | **42.00** | 1.38 | 1.25 | * 2.63 | * 2.50 | 47.13 | 0.00 | **47.13** |
| ಮವಿಕಂ | 25.00 | 0.00 | **25.00** | 1.25 | 0.49 | * 1.74 | * 1.00 | 27.74 | 0.00 | **27.74** |
| ಹುವಿಕಂ | 105.00 | 46.00 | **151.00** | 0.00 | 2.83 | 2.83 | 2.00 | 105.00 | 50.83 | **155.83** |
| ಗುವಿಕಂ | 62.00 | 25.00 | **87.00** | 3.77 | 1.31 | 5.08 | 0.50 | 62.00 | 30.58 | **92.58** |
| ಚಾವಿಸನಿನಿ | 41.00 | 24.00 | **65.00** | 2.60 | 1.13 | 3.73 | 2.88 | 41.00 | 30.61 | **71.61** |
| ಹು.ಗ್ರಾ.ಸ.ಸಂ | 0.00 | 5.00 | **5.00** | 0.00 | 0.00 | 0.00 | 0.00 | 0.00 | 5.00 | **5.00** |
| ಒಟ್ಟು | **275.00** | **100.00** | **375.00** | **9.00** | **7.01** | **16.01** | **8.88** | **282.87** | **117.02** | **399.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ ಹಾಗು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹.105.00 ಕೋಟಿಗಳಲ್ಲಿ ₹.20.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹. 5.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ 282.87 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹. 55.83 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ₹. 30.58 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ 30.61 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ. ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

10. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

11. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015 ದಿನಾಂಕ 28.07.2015ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 4 ಟಿಎಫ್‌ಪಿ 2015, ಬೆಂಗಳೂರು ದಿನಾಂಕ 09.10.2015ರಲ್ಲಿ 2015–16ನೇ ಸಾಲಿನ ಮೂರನೇ ತ್ರೈಮಾಸಿಕಕ್ಕೆ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR. 09**

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ 29.04.2015, 18.05.2015, 01.06.2015(TA), 04.06.2015, 01.07.2015, 03.08.2015, 01.09.2015, ಮತ್ತು 15.10.2015
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4 ದಿನಾಂಕ: 22.06.2015(TA), 21.07.2015(TA) , 25.08.2015(TA) ಮತ್ತು 28.09.2015(TA)
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ದಿನಾಂಕ 22.06.2015

ಪ್ರಸ್ತಾವನೆ:

1. ಮೇಲಿನ ಕ್ರಮಾಂಕ–1ರ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01.08.2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.

3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ7197.16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗದಿಪಡಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದರ ಆದೇಶ 2013ರಲ್ಲಿ, 2011–12ನೇ ಸಾಲಿಗೆ ₹. 443.49 ಕೋಟಿಗಳಷ್ಟು ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2014ರ ದರ ಆದೇಶದಲ್ಲಿ 2014–15ನೇ ಸಾಲಿಗೆ ₹. 6391.56 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿತ್ತು. ಇದರಲ್ಲಿ ₹. 5983.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನೂ ₹. 408.56 ಕೋಟಿಗಳ ಬಾಕಿ ಸಹಾಯಧನ ಬಿಡುಗಡೆ ಮಾಡಬೇಕಾಗಿದೆ.

4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ₹. 7498.00 ಕೋಟಿಗಳ ಸಹಾಯಧನವನ್ನು ಒದಗಿಸಿದೆ. ಇದರಲ್ಲಿ ಮೇಲೆ ಓದಲಾದ (3), (4) ಮತ್ತು (5)ರ ಸರ್ಕಾರಿ ಆದೇಶಗಳಲ್ಲಿ ₹. 3,382.66 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲಾಗಿದೆ.

**₹. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್–2015 ರಿಂದ ಅಕ್ಟೋಬರ್ 2015ರ ವರೆಗೆ ಬಿಡುಗಡೆ ಮಾಡಿರುವ ಸಹಾಯಧನ | 2,725.00 |
| ದಿನಾಂಕ 13.05.2013ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ. | 62.16 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 55.41 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 56.66 |
| ತ್ರಿಪಕ್ಷೀಯ ಹೊಂದಾಣಿಕೆ – 2015–16ನೇ ಸಾಲಿನ ಆಗಸ್ಟ್ 2015ರ ಅಂತ್ಯಕ್ಕೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 481.43 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| **ಒಟ್ಟು 15.10.2015ರವರೆಗೆ ಬಿಡುಗಡೆ ಮಾಡಿದ ಸಹಾಯಧನ** | **3,382.66** |

5. 2015–16ನೇ ಸಾಲಿನಲ್ಲಿ ಆಗಸ್ಟ್ 2015ರ ಅಂತ್ಯದವರೆಗೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಸರಿಹೊಂದಿಸಿರುವ ಮೊತ್ತದ ವಿವರ ಈ ಕೆಳಕಂಡಂತಿದೆ.

**(ರೂ ಕೋಟಿಗಳಲ್ಲಿ)**

| ವಿಸಕಂ | ಬೆವಿಕಂ | ಮವಿಕಂ | ಹುವಿಕಂ | ಗುವಿಕಂ | ಚಾವಿಸನಿನಿ | ಕವಿನಿನಿ | | ಒಟ್ಟು |
|---|---|---|---|---|---|---|---|---|
| | ವಿದ್ಯುತ್ ತೆರಿಗೆ | | | | | ವಿದ್ಯುತ್ ತೆರಿಗೆ | ರಾಜಧನ | |
| **ಏಪ್ರಿಲ್–15** | 63.26 | 8.15 | 8.71 | 6.90 | 8.50 | 0.57 | 3.91 | **100.00** |
| **ಮೇ–15** | 60.47 | 9.06 | 11.88 | 8.14 | 6.80 | 0.61 | 3.04 | **100.00** |
| **ಜೂನ್–15** | 63.77 | 8.45 | 10.58 | 8.28 | 6.50 | 0.50 | 1.92 | **100.00** |
| **ಜುಲೈ–15** | 58.07 | 8.55 | 9.66 | 8.83 | 5.00 | 0.54 | 3.68 | **94.33** |
| **ಆಗಸ್ಟ್–15** | 52.27 | 8.25 | 7.95 | 6.41 | 6.84 | 0.47 | 4.91 | **87.10** |
| **ಒಟ್ಟು** | **297.84** | **42.46** | **48.78** | **38.56** | **33.64** | **2.69** | **17.46** | **481.43** |

6. 2015–16ನೇ ಸಾಲಿನ ಸೆಪ್ಟೆಂಬರ್ 2015ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಮತ್ತು ರಾಜಧನದ ಮೊತ್ತ ₹. 82.93 ಕೋಟಿಗಳನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

₹. ಕೋಟಿಗಳಲ್ಲಿ

| ಕ್ರ.ಸಂ | ವಿಸಕಂ | ಸೆಪ್ಟೆಂಬರ್ 2015 |
|---|---|---|
| 1 | ಬೆವಿಕಂ | 51.76 |
| 2 | ಮವಿಕಂ | 3.93 |
| 3 | ಹುವಿಕಂ | 10.30 |
| 4 | ಗುವಿಕಂ | 8.81 |
| 5 | ಚಾವಿಸನಿನಿ | 5.74 |
| 6 | ಕವಿನಿನಿ | 0.47 |
| | **ಒಟ್ಟು** | **81.01** |
| 7 | ಕವಿನಿನಿ(ರಾಜಧನ) | 1.92 |
| | **ಒಟ್ಟು** | **82.93** |

7. ಮೇಲೆ ವಿವರಿಸಿರುವಂತೆ, ಸೆಪ್ಟೆಂಬರ್ 2015ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ರೂ. 82.93 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 06 ಪಿಎಸ್ಆರ್ 2015/ಪಿ4 ಬೆಂಗಳೂರು ದಿನಾಂಕ: 28.10.2015**

1. 2015–16ನೇ ಸಾಲಿನ ಸೆಪ್ಟೆಂಬರ್ 2015ರ ಮಾಹೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗು ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು ರೂ. **80.54 ಕೋಟಿಗಳನ್ನು (ಎಂಬತ್ತೊಂದು ಕೋಟಿ ಐವತ್ತನಾಲ್ಕು ಲಕ್ಷ ರೂಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's PORTION** **(Rs. in Crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043-00-101-0-01 | |
| BESCOM | 51.76 | BESCOM | 51.76 |
| MESCOM | 3.93 | MESCOM | 3.93 |
| HESCOM | 10.30 | HESCOM | 10.30 |
| GESCOM | 8.81 | GESCOM | 8.81 |
| CESC | 5.74 | CESC | 5.74 |
| **Total** | **80.54** | **Total** | **80.54** |

2. 2015–16ನೇ ಸಾಲಿನ ಸೆಪ್ಟೆಂಬರ್ 2015ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ರೂ. 2.39 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಹುಬ್ಬಳ್ಳಿ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B: KPCL portion** **(Rs. in Crs)**

| DEBIT | | CREDIT | |
|---|---|---|---|
| **Head of Account** | **Total Amount** | **Head of Account** | **Total Amount** |
| Subsidy to ESCOMs | | **Royalty from KPCL** | |
| 2801-80-101-1-04-106 | | 0801-01-201-0-01 | 1.92 |
| HESCOM | 2.39 | | |
| | | **Electricity Tax** | |
| (KPCL to adjust this receipt against power purchase cost of HESCOM) | | 0043-00-101-0-01 | 0.47 |
| **TOTAL – (B)** | **2.39** | **TOTAL – (B)** | **2.39** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.

4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.

5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸ ಬೇಕಾಗಿರುವ ತೆರಿಗೆ ಮತ್ತು ರಾಜಸ್ವ ರೂ. 2.39 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.

6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 469 ವೆಚ್ಚ–1/2015 ದಿನಾಂಕ: 28.04.2015ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು ದಿನಾಂಕ 09.04.2015ರಲ್ಲಿ 2015–16ನೇ ಸಾಲಿನ ಮೊದಲ ಮತ್ತು ಎರಡನೇ ತ್ರೈಮಾಸಿಕಕ್ಕೆ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR. 10**

## ENERGY SECRETARIAT

**Sub**: - Relaxation of Article 17 (c) (4) of KFC 1957 for release of equity support to power utilities for third quarter of Financial Year 2015-16.

**Read**:- The Article 17 (c) (4) of KFC 1957.

**Preamble:**

1. In the budget estimate for 2015-16 Rs. 827.02 crs has been provided towards capital outlay on power projects. Out of this Rs. 400.30 crs has been released as at 30$^{th}$ October 2015. The balance amount of Rs. 426.72 crs has to be released as investment in power utilities during the second half of Financial Year 2015-16.
2. As per the Article 17 (c) (4) of KFC 1957 the Accountant General is required to issue the authority of intimation for payment by State Huzur Treasury on account of Government investments in Companies.
3. The Government order for Relaxation of Article 17 (c) (4) of Karnataka Financial Code 1957 for release of equity support to power utilities for the first six months of FY 2015-16 was issued vide G.O No: EN 16 PSR 2015/P1 dtd: 15.06.2015.
4. The Administrative Department has requested Finance Department to relax the condition of Article 17(c) (4) of KFC 1957 for release of Equity Support to Power Utility. Finance Department has concurred for relaxing condition of Article 17 (c) (4) of KFC 1957 vide note No. FD 1215/1204 Exp-1/ 2015 dated 29.10.2015. Hence, this order.

**GOVERNMENT ORDER NO: EN 16 PSR 2015/P1 BENGALURU, DATED 31$^{st}$ October 2015**

1. Under the circumstances explained above, Government is pleased to relax the conditions of issuing of Authority of Intimation by Accountant General for payment by Treasuries on account of Government's Investments (Equity) required under Article 17 (c)(4) of Karnataka Financial Code 1957 for release of equity support to power utilities for the third quarter of FY 2015-16.
2. This order is issued with the concurrence of the Finance Department vide Note No. FD 1215/1204 Exp-1/ 2015 dated 29.10.2015.

BY ORDER AND IN THE NAME OF GOVERNOR OF KARNATAKA,

**A. A.CHAPPARBAND**

UNDER SECRETARY TO GOVERNMENT,

ENERGY DEPARTMENT,

**PR. 11**

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. 2015–16ನೇ ಸಾಲಿನ ಆಯವ್ಯಯ.
2. ಕವಿನಿನಿ ಪತ್ರ ಸಂಖ್ಯೆ: ಎ1 ಎಫ್3 ಬಿ2/2112 ದಿನಾಂಕ 13.10.2015.
3. ಕವಿಪ್ರನಿನಿ ಪತ್ರಸಂಖ್ಯೆ: ಕವಿಪ್ರನಿನಿ/ ವ್ಯನಿ/ ಅಕಾ/ ಆಸ (ಲೆಮತ್ತುಸಂ)/ ಕೆಸಿಇ–30/14398/2009–10/83 ದಿನಾಂಕ 09.10.2015.

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1ದಿನಾಂಕ: 18.06.2015 ಮತ್ತು 31.10.2015.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ 20.06.2015, 26.06.2015 ಮತ್ತು 01.09.2015.

ಪ್ರಸ್ತಾವನೆ:

1) ಮೇಲಿನ ಕ್ರ.ಸಂ–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಈ ಕೆಳಕಂಡಂತೆ ಒದಗಿಸಲಾಗಿದೆ. ಲೆಕ್ಕಶೀರ್ಷಿಕೆ 4801-01-190-0-09-211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ರೂ. 677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಗಿರಿಜನ ಉಪಯೋಜನೆಗಾಗಿ ರೂ. 12.30 ಕೋಟಿಗಳನ್ನು ಒದಗಿಸಿದೆ. ಒಟ್ಟಾರೆ ಬಂಡವಾಳ ರೂ. 727.02 ಕೋಟಿಗಳಾಗಿರುತ್ತದೆ.

2) ಮೇಲಿನ ಕ್ರ.ಸಂ–2ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರೂ 200.00 ಕೋಟಿಗಳ ಬಂಡವಾಳವನ್ನು ಬಿಡುಗಡೆ ಮಾಡಲು ಮತ್ತು ಮೇಲಿನ ಕ್ರ.ಸಂ–3ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ರೂ 300.00 ಕೋಟಿಗಳ ಬಂಡವಾಳವನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

3) ಮೇಲಿನ ಕ್ರ.ಸಂ–4ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

4) ಮೇಲಿನ ಕ್ರಮಸಂಖ್ಯೆ 5ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಅಕ್ಟೋಬರ್ 2015ರ ವರೆಗೆ ರೂ 338.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5) ಕವಿನಿನಿ ಮತ್ತು ಕವಿಪ್ರನಿನಿಯ ಮನವಿಗಳನ್ನು ಪುರಸ್ಕರಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 75.00 ಕೋಟಿಗಳನ್ನು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ. 25.00 ಕೋಟಿಗಳ ಈಕ್ವಿಟಿ ಬಂಡವಾಳವನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 09.11.2015**

2015–16ನೇ ಸಾಲಿಗೆ ಸರ್ಕಾರವು **ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 75.00 ಕೋಟಿಗಳನ್ನು** (ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ಮತ್ತು **ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ. 25.00 ಕೋಟಿಗಳನ್ನು** (ರೂ. ಇಪ್ಪತ್ತೈದು ಕೋಟಿಗಳು ಮಾತ್ರ)ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801-01-190-0-09-211 Investment in Power Utilities (ಯೋಜನೆ)" ಯಡಿ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಆದೇಶಿಸಿದೆ.

1. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಗಳು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಗಳಿಗೆ ಬಿಡುಗಡೆ ಮಾಡಿರುವ ಬಂಡವಾಳ (Equity)ವನ್ನು ನಿರ್ದಿಷ್ಟ ಕಾಮಗಾರಿಗಳಲ್ಲಿ ಹೂಡಿರುವಂತೆ ಆರ್ಥಿಕ ಮತ್ತು ಭೌತಿಕ ಪ್ರಗತಿ ಸಲ್ಲಿಸುವುದು. ಬಂಡವಾಳ ವೆಚ್ಚ ಬಳಸಿರುವ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilisation Certificate)ವನ್ನು ಸರ್ಕಾರಕ್ಕೆ ಒದಗಿಸುವುದು.
3. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 31.10.2015ರಲ್ಲಿ ನೀಡಿದೆ.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

PR. 12

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನ ಎರಡನೇ ಮತ್ತು ಮೂರನೇ ತ್ರೈಮಾಸಿಕ್ಕೆ ಸರ್ಕಾರವು ವಿದ್ಯುತ್ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. 2015–16ನೇ ಸಾಲಿನ ಆಯವ್ಯಯ.

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18.06.2015 ಮತ್ತು 31.10.2015.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ: 26.06.2015.

**ಪ್ರಸ್ತಾವನೆ:**

1) ಮೇಲಿನ ಕ್ರ.ಸಂ–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಈ ಕೆಳಕಂಡಂತೆ ಒದಗಿಸಲಾಗಿದೆ. ಲೆಕ್ಕಶೀರ್ಷಿಕೆ 4801-01-190-0-09-211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ರೂ. 677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಗಿರಿಜನ ಉಪಯೋಜನೆಗಾಗಿ ರೂ. 12.30 ಕೋಟಿಗಳನ್ನು ಒದಗಿಸಿದೆ. ಒಟ್ಟಾರೆ ಬಂಡವಾಳ ರೂ. 727.02 ಕೋಟಿಗಳಾಗಿರುತ್ತದೆ.

2) ಮೇಲಿನ ಕ್ರ.ಸಂ–2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.

3) ದಿನಾಂಕ: 26.05.2015ರಂದು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನ ಸಭೆಯಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ (SCSP) ಮತ್ತು ಗಿರಿಜನ ಉಪಯೋಜನೆ (TSP) ಒದಗಿಸಿರುವ ಮೊತ್ತವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿಗಳ ವಿದ್ಯುದ್ಧೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಪರಿಷತ್ತಿನಲ್ಲಿ ಅನುಮೋದಿಸಿದೆ.

4) ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಮೇಲಿನ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಬಾಬ್ತು ಕ್ರಮವಾಗಿ ರೂ. 36.89 ಮತ್ತು 12.30 ಕೋಟಿಗಳಲ್ಲಿ ರೂ. 9.22 ಕೋಟಿಗಳನ್ನು ಮತ್ತು ರೂ 3.08 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.

5) ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015 ದಿನಾಂಕ: 09.04.2015ರಲ್ಲಿ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015 ದಿನಾಂಕ: 09.10.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ 2015–16ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ ಮತ್ತು ಗಿರಿಜನ ಉಪಯೋಜನೆಗಳಿಗೆ ಎರಡನೇ ಮತ್ತು ಮೂರನೇ ತ್ರೈಮಾಸಿಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ಒಟ್ಟು ರೂ 24.58 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**₹. ಕೋಟಿಗಳಲ್ಲಿ**

| ಕ್ರಸಂ | ಲೆಕ್ಕಶೀರ್ಷಿಕೆ | ಮೊತ್ತ |
|---|---|---|
| 1 | 4801-01-190-0-09-422 (SCSP) | 18.44 |
| 2 | 4801-01-190-0-09-423 (TSP) | 6.14 |
| | ಒಟ್ಟು | 24.58 |

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 10 ಪಿಎಸ್‌ಆರ್ 2015/ಪಿ1, ಬೆಂಗಳೂರು, ದಿನಾಂಕ: 09.11.2015**

1. 2015–16ನೇ ಸಾಲಿನ ಎರಡನೇ ಮತ್ತು ಮೂರನೇ ತ್ರೈಮಾಸಿಕ್ಕೆ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಲೆಕ್ಕಶೀರ್ಷಿಕೆ 4801-01-190-0-09-422–SCSP (ಯೋಜನೆ)ಯಡಿ ರೂ. 18.44 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423–TSP (ಯೋಜನೆ)ಯಡಿ ರೂ. 6.14 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳ ವಿದ್ಯುದ್ಧೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಕೆಳಗಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**₹. ಕೋಟಿಗಳಲ್ಲಿ**

| ಕ್ರಸಂ | ವಿದ್ಯುತ್ ಸರಬರಾಜು ಕಂಪನಿಗಳು | ಲೆಕ್ಕಶೀರ್ಷಿಕೆ | | ಒಟ್ಟು |
|---|---|---|---|---|
| | | 4801-01-190-0-09-422 (SCSP) | 4801-01-190-0-09-423 (TSP) | |
| 1 | ಬೆವಿಕಂ | 4.50 | 1.00 | 5.50 |
| 2 | ಮವಿಕಂ | 1.90 | 0.60 | 2.50 |
| 3 | ಹುವಿಕಂ | 3.84 | 1.50 | 5.34 |
| 4 | ಗುವಿಕಂ | 5.20 | 2.04 | 7.24 |
| 5 | ಚಾವಿಸನಿನಿ | 3.00 | 1.00 | 4.00 |
| | ಒಟ್ಟು | 18.44 | 6.14 | 24.58 |

2. ಮೇಲಿನ ಕೋಷ್ಟಕದಲ್ಲಿ ಸೂಚಿಸಿರುವ ಮೊತ್ತಕ್ಕೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತರವರು ಪ್ರತಿ ಲೆಕ್ಕಶೀರ್ಷಿಕೆಗೆ ಪ್ರತ್ಯೇಕ ಸ್ವೀಕೃತಿ ರಸೀದಿ (payee's receipts) ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಪಡೆದು ಹಣವನ್ನು ಪಡೆಯತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಹುಕ್ಕೇರಿ ಗ್ರಾಮೀಣ ಸಹಕಾರಿ ಸಂಘ ರವರು ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ವಾಗಿ ಬಳಸಿಕೊಂಡು, ಈ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

4. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18.06.2015ರಲ್ಲಿ ಮತ್ತು 31.10.2015 ನೀಡಿದೆ.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.04.2015ರಲ್ಲಿ ಮತ್ತು ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR. 13**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2015-16ರ ಹಣಕಾಸು ವರ್ಷದ ತೃತೀಯ ತ್ರೈಮಾಸಿಕಕ್ಕೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 8 ಪಿಎಸ್ಆರ್ 2015 ದಿನಾಂಕ: 16.06.2015 ಮತ್ತು 24.08.2015.

2. ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/15/ಎಜಿ/ಕೆಇಆರ್‌ಸಿ/1195 ದಿನಾಂಕ: 14.10.2015

**ಪ್ರಸ್ತಾವನೆ:**

1. 2015-16ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಒದಗಿಸುವ ಸಲುವಾಗಿ ರೂ.312.00 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ "2801-80-101-1-07-101ಯಡಿ ನಿಗಧಿಪಡಿಸಲಾಗಿದೆ. ಇದರಲ್ಲಿ ಮೊದಲ ಮತ್ತು ಎರಡನೇ ಕಂತುಗಳಲ್ಲಿ ರೂ 156.00 ಲಕ್ಷಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ 1ರ ಆದೇಶಗಳಲ್ಲಿ ಈಗಾಗಲೇ ಬಿಡುಗಡೆ ಮಾಡಲಾಗಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ 2015-16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ತೃತೀಯ ಮೂರು ತಿಂಗಳ ಅವಧಿಗೆ ಸಹಾಯಾನುದಾನ ₹. 78.00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ-2ರ ಪತ್ರದಲ್ಲಿ ಕಾರ್ಯದರ್ಶಿ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದವರು ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 8 ಪಿಎಸ್ಆರ್ 2015, ಬೆಂಗಳೂರು, ದಿನಾಂಕ: 02.11.2015**

1. ಸರ್ಕಾರವು, 2015-16ನೇ ಹಣಕಾಸು ವರ್ಷದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ ಲೆಕ್ಕ ಶೀರ್ಷಿಕೆ "2801-80-101-1-07-101 ಸಹಾಯಾನುದಾನ (ಯೋಜನೇತರ)" ಯಡಿ ಒದಗಿಸಿರುವ ಅನುದಾನದಲ್ಲಿ ತೃತೀಯ ಕಂತಿನ ರೂ.78.00 ಲಕ್ಷಗಳನ್ನು (ಎಪ್ಪತ್ತೆಂಟು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015 ದಿನಾಂಕ: 09.10.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**PR. 14**

**ಇಂಧನ ಸಚಿವಾಲಯ**

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**

1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015 ದಿನಾಂಕ: 09.04.2015 ಮತ್ತು 09.10.2015. (Delegation of Financial Powers)
4. ಸರ್ಕಾರ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015 ದಿನಾಂಕ: 02.05.2015, 18.05.2015, 04.06.2015, 06.07.2015, 05.08.2015, 01.09.2015, 15.10.2015 ಮತ್ತು 09.11.2015.
5. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ: ಕೆಇಪಿಜಿಟಿ/ಪಿ14/2015–16/755–59 ದಿನಾಂಕ: 21.11.2015.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಗಳದ್ದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಗಳದ್ದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ ಲೆಕ್ಕಶೀರ್ಷಿಕೆ "2801–80–101–1–13–106 (ಯೋಜನೇತರ)" ಯಡಿ ರೂ.550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ಈಗಾಗಲೇ ರೂ.365.00 ಕೋಟಿಗಳನ್ನು ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.
4. ಮೇಲೆ (5)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಡಿಸೆಂಬರ್ 2015ರ ಮಾಹೆಗೆ ರೂ. 74.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಡಿಸೆಂಬರ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 02.12.2015**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಡಿಸೆಂಬರ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 46.00 ಕೋಟಿ (ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2015 ಬೆಂಗಳೂರು ದಿನಾಂಕ: 09.10.2015ರಲ್ಲಿ ಮೂರನೇ ತ್ರೈಮಾಸಿಕಕ್ಕೆ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

PR. 15

## ಆರ್ಥಿಕ ಸಚಿವಾಲಯ

**ವಿಷಯ:** ಖಜಾನೆ ಇಲಾಖೆ ಮತ್ತು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯಲ್ಲಿನ ಗ್ರೂಪ್ 'ಸಿ' ಸಿಬ್ಬಂದಿಗೆ ತರಬೇತಿಯನ್ನು ನೀಡುವ ಬಗ್ಗೆ.

**ಉಲ್ಲೇಖ:**
1. ನಿರ್ದೇಶಕರು, ವಿತ್ತೀಯ ಕಾರ್ಯನೀತಿ ಸಂಸ್ಥೆ ಇವರ ಪತ್ರವಿಕಾಸಂ/ ಸಿ/46/2013–14/427, ದಿ:31.07.2015.
2. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 58 ರಾಲೆಪ 2015, ದಿ:17.08.2015.

**ಪ್ರಸ್ತಾವನೆ:–**

ಖಜಾನೆ ಇಲಾಖೆ ಮತ್ತು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಗೆ ಸಂಬಂಧಿಸಿದಂತೆ ಗ್ರೂಪ್–ಸಿ ಸಿಬ್ಬಂದಿಗೆ ತರಬೇತಿ ನೀಡುವ ವಿಷಯವು ಪರಿಶೀಲನೆಯಲ್ಲಿದ್ದು, ಈ ಕುರಿತು ವಿತ್ತೀಯ ಕಾರ್ಯನೀತಿ ಸಂಸ್ಥೆ, ಬೆಂಗಳೂರು ಇವರಿಂದ ಬಂದ ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ವಿತ್ತೀಯ ಕಾರ್ಯನೀತಿ ಸಂಸ್ಥೆಯ ಸಾಮರ್ಥ್ಯದ ಕುರಿತು ವಿವರವನ್ನು ನೀಡಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಪತ್ರದಲ್ಲಿ ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪತ್ರ ಸಂಖ್ಯೆ: ತರಬೇತಿ/ವಿವ:22/2014–15 ದಿ:27.07.2015 ರಲ್ಲಿ ನೀಡಿರುವ ಸಹಮತಿಯಲ್ಲಿ ಆಡಳಿತ ತರಬೇತಿ ಸಂಸ್ಥೆಯ ನೋಡಲ್ ಅಧಿಕಾರಿಯನ್ನು ನೇಮಕ ಮಾಡಿರುವುದನ್ನು ತಿಳಿಸಲಾಗಿರುತ್ತದೆ. ಸದರಿ ನೋಡಲ್ ಅಧಿಕಾರಿಯು ಜಿಲ್ಲಾ ತರಬೇತಿ ಸಂಸ್ಥೆಗಳನ್ನು ಗುರುತಿಸುವ, ಅವುಗಳಿಗೆ ಅಕ್ಕಪಕ್ಕದ ಜಿಲ್ಲೆಗಳ ಸದರಿ ಇಲಾಖೆಗಳ ಸಿಬ್ಬಂದಿಯನ್ನು ಸಂಯೋಜನೆಗೊಳಿಸುವ ಮಾಡ್ಯೂಲ್‌ಗಳನ್ನು ಅಂತಿಮಗೊಳಿಸುವ, ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವ ಹಾಗೂ ಸಿಬ್ಬಂದಿಗಳನ್ನು ನಿಯೋಜಿಸುವ ಮೂಲ ಸೌಲಭ್ಯಗಳನ್ನು ಕಲ್ಪಿಸುವ ಕೆಲಸಗಳನ್ನು ನಿರ್ವಹಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಆಇ 5 ಸಾವಿಯೋ 2014, ಬೆಂಗಳೂರು ದಿ:15.09.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಖಜಾನೆ ಇಲಾಖೆಯ ಮತ್ತು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಗ್ರೂಪ್–ಸಿ ಸಿಬ್ಬಂದಿಗೆ ತರಬೇತಿಯನ್ನು ನೀಡುವ ಕುರಿತು ವಿತ್ತೀಯ ಕಾರ್ಯನೀತಿ ಸಂಸ್ಥೆ, ಬೆಂಗಳೂರು, ಮೈಸೂರು ಆಡಳಿತ ತರಬೇತಿ ಸಂಸ್ಥೆಯ ಸಮನ್ವಯಾಧಿಕಾರಿ ಹಾಗೂ ಖಜಾನೆ ಇಲಾಖೆ ಮತ್ತು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಮುಖ್ಯಸ್ಥರುಗಳ ಪಾತ್ರವನ್ನು ನಮೂದಿಸಿ ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

i. ವಿತ್ತೀಯ ಕಾರ್ಯನೀತಿ ಸಂಸ್ಥೆ, ಬೆಂಗಳೂರು, ಪಾತ್ರವು ಈ ಕೆಳಕಂಡ ಪರಿಮಿತಿಗೆ ಒಳಪಟ್ಟಿರುತ್ತದೆ.

**a.** <u>**ಪಠ್ಯಕ್ರಮವನ್ನು ಸಿದ್ಧಪಡಿಸುವುದು** (Preparation of curriculum).</u>

A. ಸಂಬಂಧಿಸಿದ ಇಲಾಖೆಗಳು ಪಠ್ಯಕ್ರಮವನ್ನು ವಿನ್ಯಾಸ ಮಾಡಲು ಇಲಾಖೆಯ ಹಾಲಿ ಕಾರ್ಯನಿರ್ವಹಿಸುತ್ತಿರುವ/ನಿವೃತ್ತ ಅಧಿಕಾರಿಗಳು, ವಿಷಯತಜ್ಞರು ಹಾಗೂ ವಿತ್ತೀಯ ಕಾರ್ಯನೀತಿ ಸಂಸ್ಥೆಯ ಪ್ರತಿನಿಧಿಗಳನ್ನು ಒಳಗೊಂಡ ಪಠ್ಯಕ್ರಮ ರಚನಾ ಸಮಿತಿಯನ್ನು ರಚಿಸುವುದು.

B. ಪಠ್ಯಕ್ರಮ ವಿನ್ಯಾಸಗೊಳಿಸುವಲ್ಲಿ ವಿತ್ತೀಯ ಕಾರ್ಯನೀತಿ ಸಂಸ್ಥೆಯ ಪ್ರತಿನಿಧಿಗಳು ಭಾಗವಹಿಸತಕ್ಕದ್ದು.

**2.** <u>**ತರಬೇತಿ ಸಾಮಗ್ರಿಗಳನ್ನು ಸಿದ್ಧಪಡಿಸುವುದು** (Preparation of training material):</u>

ತರಬೇತಿ ಸಾಮಗ್ರಿಗಳ ಸಿದ್ಧತೆಯ ಕುರಿತು ಪಠ್ಯಕ್ರಮಗಳನ್ನು ರಚಿಸುವ ಸಮಿತಿಗಳಿಂದ ಸಲಹೆಗಳನ್ನು ಪಡೆದುಕೊಂಡು ಸಂಪನ್ಮೂಲ ವ್ಯಕ್ತಿಗಳಿಂದ ತರಬೇತಿ ಸಾಮಗ್ರಿಗಳನ್ನು ಸಿದ್ಧಪಡಿಸುವುದು.

**3.** <u>**ತರಬೇತುದಾರರಿಗೆ ತರಬೇತಿಯನ್ನು ನೀಡುವುದು** (Training of master trainers</u>).

ಸಂಬಂಧಿಸಿದ ಇಲಾಖೆಗಳು, ವಿತ್ತೀಯ ಕಾರ್ಯನೀತಿ ಸಂಸ್ಥೆಗೆ ತರಬೇತಿ ವಿನ್ಯಾಸಗಳನ್ನು ಒದಗಿಸಿದ ನಂತರ ಸಂಸ್ಥೆಯು ಮಾಸ್ಟರ್ ತರಬೇತುದಾರರಿಗೆ ತರಬೇತಿಯನ್ನು ನೀಡತಕ್ಕದ್ದು.

**4.** <u>**ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವುದು** (Identification of resource persons)</u>:

ವಿತ್ತೀಯ ಕಾರ್ಯನೀತಿ ಸಂಸ್ಥೆಯಲ್ಲಿ ಇರುವ ಸಂಪನ್ಮೂಲ ವ್ಯಕ್ತಿಗಳ ಮಾಹಿತಿಯನ್ನು ಕಾಲಕಾಲಕ್ಕೆ ಸಂಬಂಧಪಟ್ಟ ಇಲಾಖೆಗಳೊಂದಿಗೆ ಹಂಚಿಕೊಳ್ಳುವುದು. ಇಲಾಖೆಯವರು ಈ ಮಾಹಿತಿಯೊಂದಿಗೆ ಅವರಲ್ಲಿರುವ ಸಂಪನ್ಮೂಲ ವ್ಯಕ್ತಿಗಳು, ತರಬೇತಿದಾರರನ್ನು ಒಳಗೊಂಡಂತೆ, ತರಬೇತಿ ನೀಡುವಾಗ ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವುದು.

**5.** <u>**ಉಸ್ತುವಾರಿ ಹಾಗೂ ಮೌಲ್ಯಮಾಪನ** (Monitoring & evaluation).</u>

ಸಂಬಂಧಿಸಿದ ಇಲಾಖಾ ಮುಖ್ಯಸ್ಥರು ತರಬೇತಿ ಕಾರ್ಯಕ್ರಮಗಳ ನಿರ್ವಹಣೆ ಹಾಗೂ ಪ್ರಶಿಕ್ಷಣಾರ್ಥಿಗಳ ಕಾರ್ಯನಿರ್ವಹಣೆಯ ಮೌಲ್ಯಮಾಪನವನ್ನು ಮಾಡತಕ್ಕದ್ದು.

**b. ಉಸ್ತುವಾರಿ ಹಾಗೂ ಮೌಲ್ಯಮಾಪನ** (Monitoring & evaluation).

ತರಬೇತಿ ಅಂತ್ಯದಲ್ಲಿ ಶಿಕ್ಷಣಾರ್ಥಿಗಳು ಪಡೆದ ತರಬೇತಿಯ ಉಪಯುಕ್ತತೆ ಬಗ್ಗೆ ಆಂತರಿಕ ಮೌಲ್ಯಮಾಪನ (Internal Assessment) ವನ್ನು ಏರ್ಪಡಿಸುವುದು ಹಾಗೂ ಮೌಲ್ಯಮಾಪನದ ಫಲಿತಾಂಶವನ್ನು ಇಲಾಖೆಗಳಿಗೆ ಒದಗಿಸುವುದು.

ಇಲಾಖೆಯ ಮುಖ್ಯಸ್ಥರು ನೀಡುವ ತರಬೇತಿಯ ಬಗ್ಗೆ (ಗ್ರೂಪ್ 'ಎ', 'ಬಿ' ಮತ್ತು 'ಸಿ') ಇವರ ಪ್ರಗತಿಯ ವಿವರವನ್ನು ಸರ್ಕಾರಕ್ಕೆ ಪ್ರತಿ ತಿಂಗಳು 15ನೇ ತಾರೀಖಿನೊಳಗಾಗಿ ಮಾಸಿಕ ಪ್ರಗತಿ ಒದಗಿಸುವುದು.

**ii. ಇಲಾಖಾ ಮುಖ್ಯಸ್ಥರುಗಳ ಪಾತ್ರ ಮತ್ತು ಮೈಸೂರು ಆಡಳಿತ ತರಬೇತಿ ಸಂಸ್ಥೆಯ ಪಾತ್ರ:**

ವಾಸ್ತವವಾಗಿ ಈ ತರಬೇತಿಗಳನ್ನು ಜಿಲ್ಲಾ ತರಬೇತಿ ಸಂಸ್ಥೆಗಳು ನಿರ್ವಹಿಸುವುದರಿಂದ ಈ ನಿಟ್ಟಿನಲ್ಲಿ ಇಲಾಖಾ ಮುಖ್ಯಸ್ಥರು ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರೊಂದಿಗೆ ಸಮನ್ವಯಿಸಿ ವ್ಯವಸ್ಥೆಗೊಳಿಸುವುದು.

ಇಲಾಖಾ ಮುಖ್ಯಸ್ಥರು ಗ್ರೂಪ್–ಸಿ ಸಿಬ್ಬಂದಿಗೆ ತರಬೇತಿ ನೀಡುವಲ್ಲಿ ಸಾಧಿಸಲಾದ ಪ್ರಗತಿಯ ವರದಿಯನ್ನು ಪ್ರತಿ ಮಾಹೆಯಾನ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR. 717**

## ಕಂದಾಯ ಸಚಿವಾಲಯ

**ವಿಷಯ:** ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಕಲ್ಲೂರ ಗ್ರಾಮದ ಸರ್ವೆ ನಂ.244ರಲ್ಲಿ ಕ್ಷೇತ್ರ 47.13 ಎಕರೆ ಸರ್ಕಾರಿ ಗೋಮಾಳ ಜಮೀನನ್ನು ಮೆ.ಚೆಟ್ಟಿನಾಡ್ ಸಿಮೆಂಟ್ ಕಂಪನಿ ಇವರಿಗೆ ಮಂಜೂರು ಮಾಡಲು ಹಾಗೂ ಮಂಜೂರು ಮಾಡಿದ ಸದರಿ ಜಮೀನಿಗೆ ಬದಲಾಗಿ ಕಂಪನಿಯವರು ಖಾಸಗಿಯವರಿಂದ ಜಮೀನು ಖರೀದಿಸಿ ನೀಡುತ್ತಿರುವ ಜಮೀನನ್ನು ಗೋಮಾಳಕ್ಕಾಗಿ ಕಾಯ್ದಿರಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿ, ಕಲಬುರಗಿ ಜಿಲ್ಲೆ, ಕಲಬುರಗಿ ಇವರ ಪತ್ರ ಸಂಖ್ಯೆ: ಕಂ/ಭೂಮಿ–1/227/2011–12, ದಿನಾಂಕ: 12.08.2014.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಕಲಬುರಗಿ ಇವರು ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಕಲ್ಲೂರ ಗ್ರಾಮದಲ್ಲಿ ಸಿಮೆಂಟ್ ತಯಾರಿಕಾ ಕಂಪನಿಯನ್ನು ಸ್ಥಾಪಿಸಲು ಮೆ.ಚೆಟ್ಟಿನಾಡ್ ಸಿಮೆಂಟ್ ಕಂಪನಿ ಪ್ರೈ.ಲಿಮಿಟೆಡ್, ಚೆನ್ನೈ., ಇವರು ಖಾಸಗಿಯವರಿಂದ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಅಡಿಯಲ್ಲಿ ಜಮೀನು ಖರೀದಿಸಿದ್ದಾರೆಂದು ತಿಳಿಸುತ್ತಾ, ಸದರಿ ಜಮೀನಿನ ಮಧ್ಯದಲ್ಲಿ 47–13 ಎಕರೆ ಸರ್ಕಾರಿ ಗೋಮಾಳ ಜಮೀನಿದ್ದು, ಸದರಿ ಜಮೀನನ್ನು ಮಂಜೂರು ಮಾಡಬೇಕೆಂದು ಕಂಪನಿಯವರು ಕೋರಿರುತ್ತಾರೆಂದು ಹಾಗೂ ಅದಕ್ಕೆ ಬದಲಾಗಿ ಕಲ್ಲೂರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಾದ 51ರಲ್ಲಿ 11.22 ಎಕರೆ, 55/1ರಲ್ಲಿ 5.04 ಎಕರೆ, 55/2ರಲ್ಲಿ 5.03 ಎಕರೆ, 55/3ರಲ್ಲಿ 6.00 ಎಕರೆ, 56/1ರಲ್ಲಿ 07.07 ಎಕರೆ, 56/2ರಲ್ಲಿ 03.21 ಎಕರೆ, 56/3ರಲ್ಲಿ 05.00 ಎಕರೆ, 56/4ರಲ್ಲಿ 02–06 ಎಕರೆ ಮತ್ತು 56/5ರಲ್ಲಿ 03.25 ಎಕರೆ ಒಟ್ಟು 49.08 ಎಕರೆ ಜಮೀನನ್ನು ಖಾಸಗಿಯವರಿಂದ ಖರೀದಿಸಿ ಗೋಮಾಳ ಜಮೀನಿಗೆ ಪರ್ಯಾಯವಾಗಿ ನೀಡುತ್ತಿದ್ದು, ಅದನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಗೋಮಾಳಕ್ಕಾಗಿ ಕಾಯ್ದಿರಿಸುವ ಕುರಿತು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಂದುವರೆದು ಸರ್ಕಾರದ ಆದೇಶ ಸಂಖ್ಯೆ: ಸಿಐ 117 ಎಸ್‌ಪಿಐ 2008, ದಿನಾಂಕ:26.04.2008ರಲ್ಲಿ ಮೆ.ಚೆಟ್ಟಿನಾಡ್ ಸಿಮೆಂಟ್ ಕಾರ್ಪೋರೇಷನ್ ಲಿ., ಇವರಿಗೆ ಕಲಬುರಗಿ ಜಿಲ್ಲೆಯ ಚಿಂಚೊಳಿ ತಾಲ್ಲೂಕಿನ ಕಲ್ಲೂರ ಗ್ರಾಮದಲ್ಲಿ ಸುಮಾರು 1400 ಎಕರೆ ಪ್ರದೇಶದ ವಿಸ್ತೀರ್ಣದಲ್ಲಿ ವಾರ್ಷಿಕ 2.5 ಮೆಗಾ ಟನ್ ಸಿಮೆಂಟ್ ಘಟಕವನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ ಎಂದು ತಿಳಿಸಲಾಗಿದೆ.

ಹಾಗೂ ಮೆ.ಚೆಟ್ಟಿನಾಡ್ ಸಿಮೆಂಟ್ ಕಂಪನಿ ಪ್ರೈ ಲಿಮಿಟೆಡ್ ಇವರು ದಿನಾಂಕ:29.10.2013ರಂದು ಜಿಲ್ಲಾಧಿಕಾರಿ, ಕಲಬುರಗಿ ಇವರಿಗೆ ಮನವಿಯನ್ನು ಸಲ್ಲಿಸಿ ಸಿಮೆಂಟ್ ಘಟಕ, 30 ಮೆಘಾ ವ್ಯಾಟ್ ಕ್ಯಾಪ್ಟಿವ್ ಪವರ್ ಪ್ಲಾಂಟ್ ಮತ್ತು 4 ಎಂ.ಟಿ.ಪಿ.ಎ ಕ್ಯಾಪ್ಟಿವ್ ಲೈಮ್‌ಸ್ಟೋನ್ ಮೈನಿಂಗ್ ಸ್ಥಾಪಿಸಲು 1100 ಎಕರೆ ಜಮೀನನ್ನು ಖರೀದಿ ಮಾಡಿದ್ದು, ಈ ಜಮೀನುಗಳ ಮಧ್ಯ ಭಾಗದಲ್ಲಿ ಅಂದರೆ ಸ.ನಂ. 244ರಲ್ಲಿ 47–13 ಎಕರೆ ಸರ್ಕಾರಿ ಗೋಮಾಳ ಜಮೀನನ್ನು ಕಂಪನಿಗೆ ಮಂಜೂರು ಮಾಡಿದಲ್ಲಿ, ಕಲ್ಲೂರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 49.08 ಎಕರೆ ಜಮೀನನ್ನು ಖಾಸಗಿಯವರಿಂದ ಖರೀದಿಸಿ ಗೋಮಾಳಕ್ಕಾಗಿ ಪರ್ಯಾಯ ಜಮೀನನ್ನು ಕಂಪನಿಯು ನೀಡುತ್ತದೆ ಎಂದು ತಿಳಿಸಿದೆ. ಸರ್ಕಾರವು ನೀಡುವ ಜಮೀನು ಒಟ್ಟು ಬೆಲೆ ರೂ.49,21,800/– ಆಗಿದ್ದು, ಹಾಗೂ ಕಂಪನಿಯವರು ಬದಲಾಗಿ ನೀಡುವ ಜಮೀನಿನ ಬೆಲೆ ರೂ.51,16,800/– ಆಗಿರುತ್ತದೆ.

ಮುಂದುವರೆದು ಸಹಾಯಕ ಆಯುಕ್ತರು, ಸೇಡಂ ಹಾಗೂ ತಹಶೀಲ್ದಾರ್, ಚಿಂಚೋಳಿ ಇವರುಗಳು ದಿನಾಂಕ:29.05.2014ರಂದು ಕಲ್ಲೂರ ಗ್ರಾಮದಲ್ಲಿ ಚೆಟ್ಟಿನಾಡು ಸಿಮೆಂಟ್ ಕಂಪನಿಗೆ ಸ.ನಂ. 244ರಲ್ಲಿ 47.13 ಎಕರೆ ಜಮೀನಿನ ಅದಲು–ಬದಲಿಗೆ ಸಂಬಂಧಿಸಿದಂತೆ ಗ್ರಾಮ ಸಭೆಯನ್ನು ನಡೆಸಿದ್ದು, ಕಲ್ಲೂರ ಗ್ರಾಮದ ರೈತಾಪಿ ವರ್ಗದವರು ಸದರಿ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿನ ಜಮೀನುಗಳನ್ನು ಮೆ.ಚೆಟ್ಟಿನಾಡ ಸಿಮೆಂಟ್ ಕಂಪನಿಯವರು ಖರೀದಿಸಲು ಒಪ್ಪಿಗೆ ಪತ್ರವನ್ನು ನೀಡಿದ್ದಾರೆಂದು, ಕಂಪನಿಯವರು ಜಮೀನು ಖರೀದಿ ಮಾಡುವಾಗ ಒಂದೇ ರೀತಿಯ ಮೌಲ್ಯ ನಿರ್ಧರಿಸಬೇಕೆಂದು ಕಂಪನಿಯವರನ್ನು ಮತ್ತು ಸಹಾಯಕ ಆಯುಕ್ತರಲ್ಲಿ ವಿನಂತಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು, ಕಲಬುರಗಿ ಜಿಲ್ಲೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 35 ಎಲ್‌ಜಿಜಿ 2014, ಬೆಂಗಳೂರು, ದಿನಾಂಕ:04.11.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಕಲ್ಲೂರ ಗ್ರಾಮದಲ್ಲಿ ಮೆ.ಚೆಟ್ಟಿನಾಡು ಸಿಮೆಂಟ್ ಕಂಪನಿಯವರು ಈಗಾಗಲೇ ಖಾಸಗಿಯವರಿಂದ ಖರೀದಿಸಿರುವ ಜಮೀನಿನ ಮಧ್ಯ ಭಾಗದಲ್ಲಿ ಬರುವ ಸ.ನಂ. 244ರಲ್ಲಿ 47.13 ಎಕರೆ ಗೋಮಾಳ ಜಮೀನನ್ನು ಸದರಿ ಕಂಪನಿಯವರಿಗೆ ಸಿಮೆಂಟ್ ತಯಾರಿಕಾ ಘಟಕವನ್ನು ಸ್ಥಾಪಿಸಲು ಮಂಜೂರು ಮಾಡಿ, ಸದರಿ ಗೋಮಾಳ ಜಮೀನಿಗೆ ಪರ್ಯಾಯವಾಗಿ ಮೆ.ಚೆಟ್ಟಿನಾಡು ಸಿಮೆಂಟ್ ಕಂಪನಿಯವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಲ್ಲಿ ಕಲ್ಲೂರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಾದ 51ರಲ್ಲಿ 11.22 ಎಕರೆ, 55/1ರಲ್ಲಿ 5.04 ಎಕರೆ, 55/2ರಲ್ಲಿ 5.03 ಎಕರೆ, 55/3ರಲ್ಲಿ 6.00 ಎಕರೆ, 56/1ರಲ್ಲಿ 07.07 ಎಕರೆ, 56/2ರಲ್ಲಿ 03.21

ಎಕರೆ, 56/3ರಲ್ಲಿ 05.00 ಎಕರೆ, 56/4ರಲ್ಲಿ 02–06 ಎಕರೆ ಮತ್ತು 56/5ರಲ್ಲಿ 03.25 ಎಕರೆ ಒಟ್ಟು 49.08 ಎಕರೆ ಜಮೀನನ್ನು ಖಾಸಗಿಯವರಿಂದ ಖರೀದಿಸಿ ನೀಡುವುದನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಗೋಮಾಳ ಉದ್ದೇಶಕ್ಕಾಗಿ ಕಾಯ್ದಿರಿಸಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಸರ್ಕಾರವು ಮಂಜೂರಾತಿ ನೀಡಿದೆ.

**ಷರತ್ತುಗಳು:–**

1) ಕಂಪನಿಗೆ ಹಸ್ತಾಂತರಿಸಲಾಗುವ ಗೋಮಾಳ ಜಮೀನಿಗೆ ಬದಲಾಗಿ ಕಂಪನಿಯವರು ಗೋಮಾಳ ಜಮೀನಾಗಿ ಪರಿವರ್ತಿಸುವ ಪಟ್ಟಾ ಜಮೀನು ಒತ್ತುವರಿಯಾಗದಂತೆ ತಡೆಯಲು ತಂತಿ ಬೇಲಿ ನಿರ್ಮಿಸುವುದು.

2) ಸದರಿ ಜಮೀನಿನಲ್ಲಿ ಜಾನುವಾರುಗಳಿಗಾಗಿ ಅವಶ್ಯವಿರುವ ಕಡೆ ಗೋ ಕಟ್ಟೆ ನಿರ್ಮಿಸುವುದು ಹಾಗೂ ನೀರಿನ ಸೌಲಭ್ಯ ಒದಗಿಸುವುದು.

3) ಸದರಿ ಜಮೀನಿನಲ್ಲಿ ಗ್ರಾಮಸ್ಥರಿಗೆ ಅನುಕೂಲವಾಗುವಂತೆ ಅವಶ್ಯವಿರುವ ಕಡೆ ಸಂಪರ್ಕ ರಸ್ತೆಯನ್ನು ಕಲ್ಪಿಸಿಕೊಡತಕ್ಕದ್ದು.

4) ಸದರಿ ಜಮೀನಿನಲ್ಲಿ ಗೋಮಾಳ ಲಕ್ಷಣಗಳನ್ನು ಕಾಯ್ದುಕೊಳ್ಳಲು ಕಂಪನಿಯು 5 ವರ್ಷಗಳ ಕಾಲ ಮೇಲ್ವಿಚಾರಣೆ ನಿರ್ವಹಿಸುವಂತೆ ಕಂಪನಿಯೊಂದಿಗೆ ಸೂಕ್ತ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

5) ಕಂಪನಿಯವರು ಬಿಟ್ಟುಕೊಡುವ ಪಟ್ಟಾ ಜಮೀನನ್ನು ಆರ್.ಟಿ.ಸಿಯಲ್ಲಿ ಗೋಮಾಳ ಜಮೀನು ಎಂದು ದಾಖಲಿಸುವುದು.

6) ಗೋಮಾಳ ಜಮೀನಾಗಿ ಪರಿವರ್ತಿಸುತ್ತಿರುವ ಜಮೀನಿನಲ್ಲಿ ಕೊಳವೆ ಬಾವಿ ವ್ಯವಸ್ಥೆ ಮತ್ತು ಹುಲ್ಲುಗಾವಲು ಪ್ರದೇಶದಂತೆ ಪರಿವರ್ತಿಸಲು ಕಂಪನಿಯವರು ಕ್ರಮವಹಿಸುವುದು.

7) ಕಂಪನಿಗೆ ಹಸ್ತಾಂತರಿಸಲಾಗುವ ಗೋಮಾಳ ಜಮೀನಿನ ಹಾಗೂ ಕಂಪನಿಯು ಬಿಟ್ಟುಕೊಡುವ ಪಟ್ಟಾ ಜಮೀನಿನ ಹಸ್ತಾಂತರ ಪ್ರಕ್ರಿಯೆ ನಡೆಯುವ ಸಮಯದಲ್ಲಿ ವಾಸ್ತವ ಅಂಶಗಳನ್ನು/ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಜಿಲ್ಲಾಧಿಕಾರಿಗಳು ಪೂರಕ ಷರತ್ತುಗಳನ್ನು ವಿಧಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಲ್.ಮಹಾಂತೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಭೂ.ಮಂಜೂರಾತಿ–3)

PR. 699

SC. 50

## ಕಂದಾಯ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ ಪವನ ವಿದ್ಯುತ್ ಯಂತ್ರವನ್ನು ಅಳವಡಿಸಲು ಹಾಗೂ ರಸ್ತೆ ನಿರ್ಮಿಸಲು ಮೆ.ಗ್ರೀನ್ ಇನ್ಫ್ರಾ ವಿಂಡ್ ಸೆಲ್ಯೂಷನ್ ಲಿ.ನವದೆಹಲಿ ಹಾಗೂ ಮೆ.ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿ. ನವದೆಹಲಿ ಇವರಿಗೆ ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್/110/2014–15, ದಿನಾಂಕ: 03.03.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ದಿನಾಂಕ: 03.03.2015ರ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ದಾವಣಗೆರೆ ಇವರು ಹರಪನಹಳ್ಳಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿನ ಸರ್ವೆ ನಂಬರುಗಳಲ್ಲಿ ಒಟ್ಟು 30–35 ಎಕರೆ ಜಮೀನನ್ನು ಮೆ.ಗ್ರೀನ್ ಇನ್ಫ್ರಾ ವಿಂಡ್ ಸೆಲ್ಯೂಷನ್ ಲಿ. ನವದೆಹಲಿ ಇವರಿಗೆ ಹಾಗೂ ಮೆ.ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿ.ನವದೆಹಲಿ ಇವರಿಗೆ 46.01 ಎಕರೆ ಜಮೀನನ್ನು ಒಟ್ಟಾರೆ ಎರಡೂ ಕಂಪನಿಗಳಿಗೆ ವಿದ್ಯುತ್ ಯಂತ್ರಗಳನ್ನು ಅಳವಡಿಸಲು 76.36 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದು, ಗುತ್ತಿಗೆ ನೀಡುವ ಅವಧಿಯು ದೀರ್ಘಾವದಿಯದ್ದಾಗಿದ್ದು, ಗುತ್ತಿಗೆಗೆ ನೀಡಿದ ನಂತರ ಪ್ರಸ್ತಾಪಿತ ಸಂಸ್ಥೆಯವರು ಜಮೀನನ್ನು ಸರ್ಕಾರಕ್ಕೆ ಬಿಟ್ಟುಕೊಡುವ ಸಂದರ್ಭಗಳು ಕಡಿಮೆ ಇರುವುದರಿಂದ ಸದರಿ ಸಂಸ್ಥೆಗೆ ಗುತ್ತಿಗೆ ನೀಡುವ ಬದಲು ಹೊಸ ಭೂ ಸ್ವಾಧೀನ ಕಾಯ್ದೆಯಂತೆ ಮಾರುಕಟ್ಟೆ ಮೌಲ್ಯದ 4ರಷ್ಟು ಹಣವನ್ನು ವಿಧಿಸಿ ಮಂಜೂರು ಮಾಡುವುದು ಸೂಕ್ತವೆಂದು ಅಭಿಪ್ರಾಯ ನೀಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಮುಂದುವರಿದು, ಜಿಲ್ಲಾಧಿಕಾರಿಗಳು, ದಾವಣಗೆರೆ ಇವರು ತಮ್ಮ ದಿ.26.11.2014ರ ಪತ್ರದಲ್ಲಿ ಮೆ.ಗ್ರೀನ್ ಇನ್ಫ್ರಾ ವಿಂಡ್ ಸೆಲ್ಯೂಷನ್ ಲಿ. ನವದೆಹಲಿ ಹಾಗೂ ಮೆ.ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿ. ನವದೆಹಲಿ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಪ್ರಸ್ತಾಪಿಸಿರುವ ಜಮೀನಿನಲ್ಲಿ ಸಣ್ಣಪುಟ್ಟ ಕುರುಚಲು ಗಿಡಗಳಿದ್ದು, ಬೆಲೆ ಬಾಳುವ ಯಾವುದೇ ಮರ ಮಾಲ್ಕಿಗಳಾಗಲೀ, ಪುರಾತನ ಕಾಲದ ಕಟ್ಟಡ ಸ್ಮಾರಕಗಳಾಗಲೀ ಇರುವುದಿಲ್ಲ. ಅಲ್ಲದೆ ಸದರಿ ಜಮೀನುಗಳಲ್ಲಿ ಭೂ ಮಂಜೂರಾತಿ ಕೋರಿ ನಮೂನೆ 50 ಮತ್ತು 53ರಲ್ಲಿ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಆದರೆ ಹರಪನಹಳ್ಳಿ ಗ್ರಾಮದ ಸ.ನಂ. 128/1ರಲ್ಲಿ ಉಚ್ಚಂಗಿದೇವಿಯ ದೇವಸ್ಥಾನವಿದ್ದು, ಪ್ರಸ್ತಾಪಿತ ಪ್ರದೇಶಕ್ಕೆ ದೇವಾಲಯವು 400 ಮೀಟರ್ ಅಂತರದಲ್ಲಿದ್ದು, ದೇವಸ್ಥಾನಕ್ಕೆ ಯಾವುದೇ ಧಕ್ಕೆ ಆಗದಂತೆ ಪವನ ವಿದ್ಯುತ್ ಯಂತ್ರಗಳನ್ನು ಅಳವಡಿಸಿಕೊಳ್ಳಲು ಪ್ರಸ್ತಾಪಿತ ಸಂಸ್ಥೆಗಳಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡಬಹುದು ಎಂದು ವರದಿ ಮಾಡಿರುತ್ತಾರೆ.

3. ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ ಲಿಮಿಟೆಡ್, ನವದೆಹಲಿ ಇವರು ದಿ.27.08.2013ರಂದು ತಹಶೀಲ್ದಾರ್, ಹರಪನಹಳ್ಳಿ ತಾಲ್ಲೂಕು ಇವರಿಗೆ ಮನವಿಯನ್ನು ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ: ಇಎನ್ 176 ಎನ್‌ಸಿಇ 2013, ದಿನಾಂಕ:14.08.2013ರಲ್ಲಿ ಹರಪನಹಳ್ಳಿ ಮತ್ತು ಮಾದಾಪುರ ಗ್ರಾಮಗಳಲ್ಲಿ 36 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್‌ಚ್ಛಕ್ತಿ ಯಂತ್ರಗಳನ್ನು ಸ್ಥಾಪಿಸಲು ಅನುಮತಿ ನೀಡಿರುವುದರಿಂದ 30 ವರ್ಷಗಳ ಅವಧಿಗಾಗಿ ಸರ್ಕಾರಿ ಜಮೀನನ್ನು

ಗುತ್ತಿಗೆ ಆಧಾರದ ಮೇಲೆ ನೀಡುವಂತೆ ಕೋರಿರುತ್ತಾರೆ. ಹಾಗೂ ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್, ನವದೆಹಲಿ ಇವರು ದಿ.27.08.2013ರಂದು ತಹಶೀಲ್ದಾರ್‌ರವರಿಗೆ ಮನವಿಯನ್ನು ಸಲ್ಲಿಸಿ, ಸರ್ಕಾರದ ಆದೇಶ ಸಂಖ್ಯೆ: ಇಎನ್ 175 ಎನ್‌ಸಿಇ 2013, ದಿನಾಂಕ:14.08.2013ರಲ್ಲಿ ಹರಪನಹಳ್ಳಿ, ಅನಂತಹಳ್ಳಿ, ಅಡವಿಹಳ್ಳಿ ಗ್ರಾಮಗಳಲ್ಲಿ 48 ಮೆ.ವ್ಯಾ ಪವನ ವಿದ್ಯುತ್ಚಕ್ತಿ ಯಂತ್ರಗಳನ್ನು ಸ್ಥಾಪಿಸಲು ಇಂಧನ ಇಲಾಖೆಯು ಅನುಮತಿ ನೀಡಿರುವುದರಿಂದ 30 ವರ್ಷಗಳ ಅವಧಿಗೆ ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

4. ಮುಂದುವರಿದು ಗ್ರೀನ್ ಇನ್ಫ್ರಾ ವಿಂಡ್ ಸಲ್ಯೂಷನ್ ಲಿಮಿಟೆಡ್, ನವದೆಹಲಿ ಹಾಗೂ ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್, ನವದೆಹಲಿ ಇವರು ದಿ. 05.02.2015ರಂದು ಜಿಲ್ಲಾಧಿಕಾರಿಗಳು, ದಾವಣಗೆರೆ ಇವರಿಗೆ ಮನವಿಯನ್ನು ಸಲ್ಲಿಸಿ, ಹಣದ ಅಭಾವವಿರುವುದರಿಂದ ಪ್ರಸ್ತಾಪಿತ ಜಮೀನುಗಳನ್ನು ಮಾರುಕಟ್ಟೆ ಬೆಲೆಗೆ ಖರೀದಿಸಲು ಸಾಧ್ಯವಾಗದೇ ಇರುವುದರಿಂದ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡುವಂತೆ ಕೋರಿರುತ್ತಾರೆ.

5. ಉಪನೋಂದಣಾಧಿಕಾರಿಗಳು, ಹರಪನಹಳ್ಳಿ ಇವರು ದಿನಾಂಕ:20.10.2014ರಂದು ಹರಪನಹಳ್ಳಿ ಗ್ರಾಮದಲ್ಲಿ ಖುಷ್ಕಿ(ಕೆಂಪು) ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ 4.00 ಲಕ್ಷ, ಮಾದಾಪುರ ಗ್ರಾಮದಲ್ಲಿ ಖುಷ್ಕಿ(ಕೆಂಪು) ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ.1.00 ಲಕ್ಷ, ಅನಂತನಹಳ್ಳಿ ಗ್ರಾಮದ ಖುಷ್ಕಿ(ಕೆಂಪು) ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ 1.00 ಲಕ್ಷ, ಹಾಗೂ ಅಡವಿಹಳ್ಳಿ ಗ್ರಾಮದ ಖುಷ್ಕಿ(ಕೆಂಪು) ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ 1.40 ಲಕ್ಷಗಳಿರುವುದಾಗಿ ವರದಿ ಮಾಡಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 22 ಎಲ್‌ಜಿಸಿ 2015, ಬೆಂಗಳೂರು, ದಿನಾಂಕ:20.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ **ಮೆ.ಗ್ರೀನ್ ಇನ್ಫ್ರಾ ವಿಂಡ್ ಸೆಲ್ಯೂಷನ್ ಲಿ. ನವದೆಹಲಿ** ಇವರಿಗೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಹರಪನಹಳ್ಳಿ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 30.35 ಎಕರೆ ಜಮೀನನ್ನು ಹಾಗೂ **ಮೆ.ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿ. ನವದೆಹಲಿ ಇವರಿಗೆ** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಹರಪನಹಳ್ಳಿ, ಅನಂತಹಳ್ಳಿ ಹಾಗೂ ಅಡವಿಹಳ್ಳಿ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ **46–01** ಎಕರೆ **ಒಟ್ಟು 76–36 ಎಕರೆ** ಜಮೀನನ್ನು ಪವನ ವಿದ್ಯುತ್ ಯಂತ್ರಗಳನ್ನು ಅಳವಡಿಸುವ ಸಲುವಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ ಮಾರುಕಟ್ಟೆ ದರದ ಶೇ.10ರಷ್ಟು ವಾರ್ಷಿಕ ಗುತ್ತಿಗೆ ದರ ನಿಗಧಿಪಡಿಸಿ ಹಾಗೂ ನಿಯಮಾನುಸಾರ ಇನ್ನಿತರ ದರಗಳನ್ನು ವಿಧಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಶೇ.10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:–**

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
5. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.
6. ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969)ರ ನಿಯಮ 19ರ ಮೇರೆಗೆ ಗೊತ್ತುಪಡಿಸುವ ವಾರ್ಷಿಕ ಗುತ್ತಿಗೆ ದರವನ್ನು ತಪ್ಪದೇ ಪಾವತಿಸತಕ್ಕದ್ದು.
7. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಲ್.ಮಹಾಂತೇಗೌಡ**

PR. 704 ಸರ್ಕಾರದ ಅಧೀನ ಕಾರ್ಯದರ್ಶಿ

SC. 25 ಕಂದಾಯ ಇಲಾಖೆ(ಭೂ.ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಹೊಸಹಳ್ಳಿ ಹೋಬಳಿಯ ವಿವಿಧ ಗ್ರಾಮಗಳಲ್ಲಿ ಪವನ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಮೆ.ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ ಬೆಂಗಳೂರು ಇವರಿಗೆ ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರ ಪತ್ರ ಸಂಖ್ಯೆ: ಕಂ/ಪ್ರಾಆಕ/ಭೂಮಿ–1/138/2014–15, ದಿನಾಂಕ: 19.03.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಕಲಬರುಗಿ ವಿಭಾಗ, ಕಲಬುರಗಿ ಇವರು ದಿನಾಂಕ: 19.03.2015ರ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರು ತಮ್ಮ ಪ್ರಸ್ತಾವನೆ ದಿನಾಂಕ:07.10.2014ರಲ್ಲಿ ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಹೊಸಹಳ್ಳಿ ಹೋಬಳಿಯ ಸೂಲದಹಳ್ಳಿ, ಹಾರಕಬಾವಿ, ಬೆಳ್ಳಿಕಟ್ಟೆ, ಬಯಲುತುಂಬರಗುದ್ದಿ ಮತ್ತು ಹಿರೇಕುಂಬಳಕುಂಟೆ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 28.12 ಎಕರೆ ಸರ್ಕಾರಿ ಜಮೀನನ್ನು ಪವನ

ವಿದ್ಯುತ್ ಯೋಜನೆ(ಅಂದರೆ 12 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆಗೆ) 20 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಮೆ:ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ ಬೆಂಗಳೂರು ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು,1969ರ ನಿಯಮ 19(3)ರನ್ವಯ ಮಂಜೂರು ಮಾಡಲು ಪ್ರಸ್ತಾವನೆಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ಜಮೀನನ್ನು 20 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಜಿಲ್ಲಾಧಿಕಾರಿಯವರು ಪ್ರಸ್ತಾಪಿಸಿದ್ದರೂ, ಪ್ರಾದೇಶಿಕ ಆಯುಕ್ತರು ಅದನ್ನು 12 ವರ್ಷಗಳ ಅವಧಿಗೆ ನೀಡಲು ಶಿಫಾರಸ್ಸು ಮಾಡಿದ್ದಾರೆ.

ಮುಂದುವರಿದು, ಮೆ.ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ., ಬೆಂಗಳೂರು ಸದರಿ ಪ್ರಸ್ತಾಪಿತ ಗುತ್ತಿಗೆ ಆಧಾರದ ಮೇಲೆ ನೀಡಲಾಗುವ ಜಮೀನನ್ನು ಕೆಳಕಂಡ ಉದ್ದೇಶಗಳಿಗೆ ಉಪಯೋಗಿಸಲು ಉದ್ದೇಶಿಸಿದ್ದಾರೆಂದು ತಿಳಿಸಿದ್ದಾರೆ.

| | |
|---|---|
| (ಎ) **WEC Corridor** | **– 10.00 ಎಕರೆಗಳು** |
| (ಬಿ) **Wind Farm Road** | **– 09.96 ಎಕರೆಗಳು ಮತ್ತು** |
| (ಸಿ) **ವಿದ್ಯುತ್ ಲೈನ್‌ಗಳಿಗಾಗಿ** | **– 08.16 ಎಕರೆಗಳು** |
| **ಒಟ್ಟು** | **28.12 ಎಕರೆ** |

ಮುಂದುವರೆದು, ಸರ್ಕಾರಿ ಆದೇಶ ಸಂಖ್ಯೆ: ಇಎನ್ 302 ಎನ್‌ಸಿಇ 2006, ದಿನಾಂಕ:16.10.2006 ಹಾಗೂ ತಿದ್ದುಪಡಿ ಸಂಖ್ಯೆ: ಇಎನ್ 302 ಎನ್‌ಸಿಇ 2011, ದಿನಾಂಕ:07.01.2012ರಲ್ಲಿ ಇಂಧನ ಇಲಾಖೆಯು ಮೆ.ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ರವರಿಗೆ ಕೋಲಾರ, ತುಮಕೂರು ದಾವಣಗೆರೆ, ಬೆಂಗಳೂರು ಗ್ರಾಮಾಂತರ, ಹಾಸನ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು 477.36 ಮೆಗಾ ವ್ಯಾಟ್ ವಿದ್ಯುತ್ ವಿಂಡ್ ಮಿಲ್‌ಗಳನ್ನು ಸ್ಥಾಪಿಸಲು ಅನುಮತಿಯನ್ನು ನೀಡಿದೆ. ಅದರಲ್ಲಿ ಬಳ್ಳಾರಿ ಜಿಲ್ಲೆಯ ನಿಂಬಳಗೆರೆಯಲ್ಲಿ 12 ಮೆಗಾ ವ್ಯಾಟ್ ವಿದ್ಯುತ್ ವಿಂಡ್ ಮಿಲ್ ಯೋಜನೆಯನ್ನು ಸ್ಥಾಪಿಸುವುದು ಸಹ ಸೇರಿದೆ.

ಉಪನೋಂದಣಾಧಿಕಾರಿ, ಕೂಡ್ಲಗಿಯವರು ದಿನಾಂಕ:26.05.2015ರಂದು ವರದಿ ಮಾಡಿರುವಂತೆ ಕೂಡ್ಲಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆಯಲ್ಲಿನ ಮೇಲ್ಕಂಡ ಐದು ಗ್ರಾಮಗಳ ವಿವಿಧ ಸರ್ವೆ ನಂಬರುಗಳಲ್ಲಿ ಮಾರುಕಟ್ಟೆ ಬೆಲೆಯು ಪ್ರತಿ ಎಕರೆಗೆ ರೂ.52,218/– ರಿಂದ ರೂ.79,026/–ರಷ್ಟಿದೆಯೆಂದು ತಿಳಿಸಿರುತ್ತಾರೆ. ಅದರಂತೆ ಪ್ರಸ್ತಾಪಿತ 28.12 ಎಕರೆ ಜಮೀನಿಗೆ ಮಾರುಕಟ್ಟೆ ಬೆಲೆಯು ಸುಮಾರು ರೂ.17 ಲಕ್ಷಗಳಾಗುತ್ತದೆ.

ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 32 ಎಲ್‌ಜಿಇ 2015,ಬೆಂಗಳೂರು, ದಿನಾಂಕ:20.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಹೊಸಹಳ್ಳಿ ಹೋಬಳಿಯ ಸೂಲದಹಳ್ಳಿ, ಹಾರಕಬಾವಿ, ಬೆಳ್ಳಿಕಟ್ಟೆ, ಬಯಲುತುಂಬರಗುದ್ದಿ ಮತ್ತು ಹಿರೆಕುಂಬಳಕುಂಟೆ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 28.00 ಎಕರೆ ಸರ್ಕಾರಿ ಜಮೀನನ್ನು ಮೆ:ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ. ಬೆಂಗಳೂರು ಇವರಿಗೆ ಪವನ ವಿದ್ಯುತ್ ಯೋಜನೆ ಸ್ಥಾಪಿಸುವ ಸಲುವಾಗಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19 ಮತ್ತು ನಿಯಮ 22ರನ್ವಯ ಮಾರುಕಟ್ಟೆ ದರದ ಶೇ.10ರಷ್ಟು ವಾರ್ಷಿಕ ಗುತ್ತಿಗೆ ದರ ನಿಗದಿಪಡಿಸಿ ಹಾಗೂ ನಿಯಮಾನುಸಾರ ಇನ್ನಿತರ ದರಗಳನ್ನು ವಿಧಿಸಿ, ಪ್ರತಿ ವರ್ಷ ಶೇ.10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:–**

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
5. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.
6. ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969)ರ ನಿಯಮ 19ರ ಮೇರೆಗೆ ಗೊತ್ತುಪಡಿಸುವ ವಾರ್ಷಿಕ ಗುತ್ತಿಗೆ ದರವನ್ನು ತಪ್ಪದೇ ಪಾವತಿಸತಕ್ಕದ್ದು.
7. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಲ್.ಮಹಾಂತೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಭೂ.ಮಂಜೂರಾತಿ–3)

**PR. 703**

**SC. 25**

## ಕಂದಾಯ ಸಚಿವಾಲಯ

**ವಿಷಯ:–** ಉಡುಪಿ ಜಿಲ್ಲೆಯ ಉಡುಪಿ ನಗರದಲ್ಲಿ ಕೇಂದ್ರ ಸರ್ಕಾರದ ನರ್ಮ್ ಯೋಜನೆಯಡಿಯಲ್ಲಿ ನಿರ್ಮಿಸಲಿರುವ ನಗರ ಸಾರಿಗೆ ಬಸ್ ನಿಲ್ದಾಣ ನಿರ್ಮಿಸಲು ಉಡುಪಿ ತಾಲ್ಲೂಕು ಮೂಡನಿಡಂಬೂರು ಗ್ರಾಮದ ಸನಂ.112/3ಎ1 ರಲ್ಲಿ 0.09 ಎಕರೆ ಮತ್ತು ಸ.ನಂ.113/1ಎ ರಲ್ಲಿ 0.32 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–** ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ರವರ ಪತ್ರ ಸಂಖ್ಯೆ: ಎಲ್.ಎನ್.ಡಿ. ಪಿ.ಡಿ.ಆರ್.ಸಿಆರ್: 283/2014–15/89248 ದಿನಾಂಕ 20.03.2015

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ ರವರು ಉಡುಪಿ ನಗರದಲ್ಲಿ ಕೇಂದ್ರ ನರ್ಮ್ ಯೋಜನೆಯಡಿಯಲ್ಲಿ ನಗರ ಸಾರಿಗೆ ಬಸ್ ನಿಲ್ದಾಣ ನಿರ್ಮಿಸಲು ಮಂಜೂರಾತಿ ದೊರಕಿರುತ್ತದೆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಉಡುಪಿ ನಗರದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಯಾವುದೇ ನಿವೇಶನಗಳನ್ನು ಹೊಂದಿರುವುದಿಲ್ಲ. ಆದುದರಿಂದ ಕೇಂದ್ರ ಸರ್ಕಾರದ ನರ್ಮ್ ಯೋಜನೆಯಡಿಯಲ್ಲಿ ಮಂಜೂರಾದ ನಗರ ಸಾರಿಗೆ ಬಸ್ ನಿಲ್ದಾಣವನ್ನು ನಿರ್ಮಿಸಲು ಉಡುಪಿ ತಾಲ್ಲೂಕಿನ ಮೂಡನಿಡಂಬೂರು ಗ್ರಾಮದ ಸನಂ.112/3ಎ1 ರಲ್ಲಿ 0.09 ಎಕರೆ/ಸೆಂಟ್ಸ್ ಮತ್ತು ಸ.ನಂ.113/1ಎ ರಲ್ಲಿ 0.32 ಎಕರೆ/ಸೆಂಟ್ಸ್ ಅಂದರೆ ಒಟ್ಟು 0.41 ಎಕರೆ/ಸೆಂಟ್ಸ್ ಜಮೀನನ್ನು ಗುರುತಿಸಲಾಗಿದ್ದು, ಸದರಿ ಜಮೀನನ್ನು ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಂದುವರೆದು, ಉದ್ದೇಶಿತ ಜಮೀನು ಸರ್ಕಾರಿ ಅನಾದೀನ ಜಮೀನಾಗಿರುತ್ತದೆ. ಅಂದರೆ ಅನಾದೀನ ಗಾಡಿ ನಿಲ್ಲುವ ಉಡುಪಿ ಮುನಿಸಿಪಾಲಿಟಿ ಸ್ಥಳ ಎಂದು ಪಹಣಿಯಲ್ಲಿ ನಮೂದಾಗಿದ್ದು, ಸದರಿ ಜಮೀನು ಕಂದಾಯ ಇಲಾಖಾ ಜಮೀನುಗಳಾಗಿರುತ್ತವೆ. ಪ್ರಸ್ತಾವಿತ ನಗರ ಸಾರಿಗೆ ಬಸ್ ನಿಲ್ದಾಣ ನಿರ್ಮಿಸಲು ಆಕ್ಷೇಪ ರಹಿತ ಜಮೀನುಗಳಾಗಿದ್ದು, ಉಡುಪಿ ನಗರದ ಮಧ್ಯಭಾಗದಲ್ಲಿರುವುದರಿಂದ ಇಲ್ಲಿ ಬಸ್ ನಿಲ್ದಾಣ ನಿರ್ಮಾಣಕ್ಕೆ ಸೂಕ್ತವಾದ ಸ್ಥಳವಾಗಿದೆ. ಉಡುಪಿ ಉಪ ನೋಂದಣಾಧಿಕಾರಿರವರ ಕಛೇರಿಯಿಂದ ಪಡೆಯಲಾದ ಮಾರ್ಗಸೂಚಿ ದರದಂತೆ ಮೂಡನಿಡಂಬೂರು ಗ್ರಾಮದ ಶಿರಿಬೀಡು ವಾರ್ಡಿನಲ್ಲಿ ಸೆಂಟ್ ಒಂದರ ದರ ರೂ. 13,07,000/– ಆಗಿರುತ್ತದೆ. ಅದರನ್ವಯ ಭೂ ಮೌಲ್ಯ ಹಾಗೂ ಇನ್ನಿತರೆ ಶುಲ್ಕಗಳು ಸೇರಿದಂತೆ ಲೆಕ್ಕಾಚಾರ ಮಾಡಲಾಗಿ ಸದರಿ 0.41 ಎಕರೆ/ಸೆಂಟ್ಸ್ ಜಮೀನಿನ ಬೆಲೆ ರೂ. 5,36,00,648/ ಗಳಾಗುತ್ತದೆ. ನಗರ ಸಾರಿಗೆ ಬಸ್ ನಿಲ್ದಾಣವನ್ನು ನಿರ್ಮಿಸಿದಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವುದರಿಂದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರಿಗೆ ಶುಲ್ಕ ವಿನಾಯಿತಿ ನೀಡಿ ಉಚಿತವಾಗಿ ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಯವರು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 56 ಎಲ್‌ಜಿಎ 2015, ದಿನಾಂಕ: 17.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ, ಮೂಡನಿಡಂಬೂರು ಗ್ರಾಮದ ಸನಂ.112/3ಎ1 ರಲ್ಲಿ 0.09 ಎಕರೆ/ಸೆಂಟ್ಸ್ ಮತ್ತು ಸ.ನಂ.113/1ಎ ರಲ್ಲಿ 0.32 ಎಕರೆ/ಸೆಂಟ್ಸ್ (ಒಟ್ಟು 0.41 ಎಕರೆ/ಸೆಂಟ್ಸ್) ಜಮೀನನ್ನು ಕೇಂದ್ರ ಸರ್ಕಾರದ ನರ್ಮ್ ಯೋಜನೆಯಡಿಯಲ್ಲಿ ನಿರ್ಮಿಸಲಿರುವ ನಗರ ಸಾರಿಗೆ ಬಸ್ ನಿಲ್ದಾಣ ನಿರ್ಮಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉಚಿತವಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

**PR. 702**

**SC. 40**

## ಕಂದಾಯ ಸಚಿವಾಲಯ

**ವಿಷಯ:–** ಧಾರ್ಮಿಕ ದತ್ತಿ ಇಲಾಖೆಯ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಹಕ್ಕಿನಲ್ಲಿ ಮೀಸಲಾತಿ ಕಲ್ಪಿಸುವ ಕುರಿತು.

**ಓದಲಾಗಿದೆ:–** (1) ಸರ್ಕಾರದ ಆದೇಶ ಸಂಖ್ಯೆ:ಕಂಇ 84 ಮುಆಬಿ 2007 ದಿನಾಂಕ:14.07.2008

(2) ಸರ್ಕಾರದ ಆದೇಶ ಸಂಖ್ಯೆ:ಕಂಇ 14 ಮುಆಬಿ 2015 ದಿನಾಂಕ:08.04.2015

(3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಡಿಎಂ/11/ ಇತರೆ/ ಸಿಆರ್/ 119/ 2015–16 ದಿನಾಂಕ:24.08.2015

**ಪ್ರಸ್ತಾವನೆ:–**

ಮೇಲೆ ಓದಲಾದ (1)ರಲ್ಲಿ ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಕಟ್ಟಡ, ಖಾಲಿ ಜಾಗ, ಅಂಗಡಿ, ಮಳಿಗೆಗಳನ್ನು ಬಹಿರಂಗ ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ಅಂತಹ ಗುತ್ತಿಗೆಯನ್ನು ನವೀಕರಿಸುವ ಸಂಬಂಧ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಕ್ರಮವಾಗಿ ಶೇ.20 ಮತ್ತು ಶೇ.5ರಷ್ಟು ಮೀಸಲಾತಿಯನ್ನು ಕಲ್ಪಿಸಲಾಗಿರುತ್ತದೆ. ನಂತರ ಮೇಲೆ ಓದಲಾದ (2)ರಲ್ಲಿ ಅಂಗವಿಕಲರಿಗೂ ಸಹ ಶೇ.3ರಷ್ಟು ಮೀಸಲಾತಿಯನ್ನು ಕಲ್ಪಿಸಿ ಕರ್ನಾಟಕ ರಾಜ್ಯ ವ್ಯಾಪ್ತಿಗೆ ಒಳಪಡುವಂತೆ ಒಟ್ಟು ಶೇ.28ರಷ್ಟು ಮೀಸಲಾತಿಯನ್ನು ಕಡ್ಡಾಯವಾಗಿ ಪಾಲಿಸುವಂತೆ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ:24.08.2015ರ ಪತ್ರದಲ್ಲಿ, ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಕಟ್ಟಡ, ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ನವೀಕರಿಸುವ ಪ್ರಕರಣಗಳಲ್ಲಿ ಮಾತ್ರ ಮೀಸಲಾತಿ ಕಲ್ಪಿಸಿದ್ದು, ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆ ನೀಡುವ ಕುರಿತು ಹರಾಜು ಮಾಡುವಲ್ಲಿ ಮೀಸಲಾತಿ ಕಲ್ಪಿಸಿರುವುದಿಲ್ಲ. ಆದುದರಿಂದ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆ ನೀಡುವಲ್ಲಿಯೂ ಸಹ ಪರಿಶಿಷ್ಟ ಜಾತಿಯವರಿಗೆ ಶೇ.20 ಮತ್ತು ಪರಿಶಿಷ್ಟ ಪಂಗಡದವರಿಗೆ ಶೇ.5ರಷ್ಟು ಮೀಸಲಾತಿ ಕಲ್ಪಿಸುವ ಕುರಿತು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 53 ಮುಆಬಿ 2015; ಬೆಂಗಳೂರು, ದಿನಾಂಕ: 09ನೇ ನವೆಂಬರ್ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಕಟ್ಟಡ, ಖಾಲಿ ಜಾಗ, ಅಂಗಡಿ, ಮಳಿಗೆಗಳನ್ನು ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ನವೀಕರಿಸುವ ಸಂಬಂಧ ಈಗಾಗಲೇ ಪರಿಶಿಷ್ಟ ಜಾತಿಯವರಿಗೆ 20% ಹಾಗೂ ಪರಿಶಿಷ್ಟ ಪಂಗಡದವರಿಗೆ 5%ರಷ್ಟು ಮೀಸಲಾತಿ ಕಲ್ಪಿಸಿದ್ದು, ಅದರಂತೆಯೇ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆ ನೀಡುವಲ್ಲಿಯೂ ಸಹ ಅದೇ ಮೀಸಲಾತಿಯನ್ನು ಕಲ್ಪಿಸಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**PR. 711**

**SC. 25**

## ಇಂಧನ ಸಚಿವಾಲಯ

**ವಿಷಯ** : ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ತಾಂತ್ರಿಕ ಮತ್ತು ತಾಂತ್ರಿಕೇತರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** 1. ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ–1) ದಿನಾಂಕ: 19.07.2014.

2. ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ–1) ದಿನಾಂಕ: 10.02.2015

3. ಮುವಿಪ ರವರ ಪತ್ರ ಸಂಖ್ಯೆ: ಮುವಿಪ/ಸಿಸ–1/1252/15–16 ದಿನಾಂಕ: 23.04.2015.

**ಪ್ರಸ್ತಾವನೆ:**

ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಮಂಗಳೂರು ಮತ್ತು ಕಲಬುರಗಿ ಉಪವಿಭಾಗಗಳಿಗೆ ಹೊಸದಾಗಿ 02 ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು ಮತ್ತು ಇಲಾಖೆಗೆ ಅವಶ್ಯಕವಾಗಿರುವ ಇತರೆ ಕೆಲವು ಹುದ್ದೆಗಳನ್ನು ಸೃಜಿಸಲು ಆರ್ಥಿಕ ಇಲಾಖೆಯ ಸಹಮತಿಗಾಗಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿ, ಆರ್ಥಿಕ ಇಲಾಖೆಯು 02 ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳು, 11 ಸಹಾಯಕ ವಿದ್ಯುತ್ ಪರಿವೀಕ್ಷಕರ ಹುದ್ದೆಗಳು, 02 ಶೀಘ್ರಲಿಪಿಗಾರರ ಹುದ್ದೆಗಳನ್ನು ಮತ್ತು 09 ಜವಾನರ ಹುದ್ದೆಗಳನ್ನು (ಹೊರಗುತ್ತಿಗೆ) ಭರಿಸಲು ಸಹಮತಿಯನ್ನು ನೀಡಿತ್ತು. ಆರ್ಥಿಕ ಇಲಾಖೆಯ ಸಹಮತಿಯ ನಂತರ ಇಲಾಖೆಗೆ ಬೇಕಾಗುವ ಅಗತ್ಯ ಹುದ್ದೆಗಳನ್ನು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಗೆ ನಮೂದಿಸಲಾದ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| ಕ್ರ.ಸಂ. | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು | **02** | ಮುಂಬಡ್ತಿ ಮೂಲಕ |
| 2 | ಶೀಘ್ರಲಿಪಿಗಾರರು | 02 | ನೇರ ನೇಮಕಾತಿ |
| 3 | ಜವಾನರು | 02 | ಹೊರಗುತ್ತಿಗೆ ಮುಖಾಂತರ |
| | **ಒಟ್ಟು** | **06** | |

ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ವಿದ್ಯುತ್ ಸ್ಥಾವರಗಳು, ಬಹು ಮಹಡಿಗಳು, ವಾಣಿಜ್ಯ ಸಂಕೀರ್ಣಗಳು, ಖಾಸಗಿ ವಿದ್ಯುತ್ ಸ್ಥಾವರಗಳು, ಮಾಲ್‌ಗಳು, ಲಿಫ್ಟ್ ಸ್ಥಾವರಗಳು, ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿದ್ದು, ಖಾಸಗಿ ಸಂಸ್ಥೆಗಳಿಂದ ಗ್ರಾಹಕರಿಗೆ ಸರಬರಾಜು ಮಾಡುವ ವಿದ್ಯುತ್ತಿಗೆ ಅನ್ವಯವಾಗುವ ವಿದ್ಯುತ್ ತೆರಿಗೆಯನ್ನು ವಿಧಿಸಿ ವಸೂಲಿ ಮಾಡಿ ಅಂಕಿ ಅಂಶಗಳನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ ಹಾಗೂ ಎಲ್ಲಾ ವಿದ್ಯುತ್ ಸರಬರಾಜು ಸಂಸ್ಥೆಗಳಿಂದ ಗ್ರಾಹಕರಿಗೆ ಸರಬರಾಜು ಮಾಡಿದ ವಿದ್ಯುತ್ತಿಗೆ ತೆರಿಗೆ ವಿಧಿಸಿ ವಸೂಲಿ ಮಾಡುತ್ತಿರುವ ಬಗ್ಗೆ ಲೆಕ್ಕ ತಪಾಸಣೆ ಕೈಗೊಂಡು ಲೆಕ್ಕ ಪರಿಶೋಧನೆ ಕೆಲಸ ನಿರ್ವಹಿಸಬೇಕಾಗಿರುತ್ತದೆ. ಇಲಾಖೆಯ ಕಂದಾಯ ಸ್ವೀಕೃತಿ, ಆಯ-ವ್ಯಯದ ಬಗ್ಗೆ ಲೆಕ್ಕ ತಪಾಸಣೆ ಮಾಡಿ ಮಹಾಲೇಖಪಾಲರ ಲೆಕ್ಕದೊಂದಿಗೆ ತಾಳೆ ಮಾಡಿ ವರದಿಯನ್ನು ಸಲ್ಲಿಸಬೇಕಾಗಿರುತ್ತದೆ. ಅದರೊಂದಿಗೆ ಇಲಾಖೆಯಲ್ಲಿ 38 ಕಚೇರಿಗಳಿದ್ದು, ಸದರಿ ಕಚೇರಿಗಳ ಕಂದಾಯ ಸ್ವೀಕೃತಿ, ಆಯ-ವ್ಯಯ ನಿರ್ವಹಣೆ ಬಗೆಗಿನ, ನಗದು ಪುಸ್ತಕ ನಿರ್ವಹಣೆ, ಸೇವಾ ಪುಸ್ತಕಗಳ ನಿರ್ವಹಣೆ ಇನ್ನಿತರ ಸೇವಾ ದಾಖಲಾತಿಗಳ ಆಂತರಿಕ ಆಡಿಟ್ ಕೆಲಸಗಳನ್ನು ಸಹ ನಿರ್ವಹಿಸಬೇಕಾಗಿರುತ್ತದೆ. ರಾಜ್ಯಾದ್ಯಂತ ಸ್ವ-ವಿದ್ಯುತ್ ಜನಕಗಳಿಂದ ಉತ್ಪಾದಿಸಿ ಸ್ವಂತಕ್ಕೆ ಬಳಸುವ ವಿದ್ಯುತ್ ಮೇಲೆ ವಿಧಿಸಿರುವ ತೆರಿಗೆಯ ಮೇಲ್ವುಸುವಾರಿ ಮತ್ತು ಆಯಾ ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ತೆರಿಗೆಯನ್ನು ಲೆಕ್ಕಚಾರ ಮಾಡಿ ಕಂದಾಯವನ್ನು ಸರ್ಕಾರಕ್ಕೆ ವಸೂಲಿ ಮಾಡಿ ಭರಿಸಬೇಕಾಗಿರುವುದರಿಂದ, ಆರ್ಥಿಕ ಇಲಾಖೆಯು ಸಹಮತಿ ನೀಡಿರುವ 11 ಸಹಾಯಕ ವಿದ್ಯುತ್ ಪರಿವೀಕ್ಷಕರ ಹುದ್ದೆಗಳ ಬದಲಿಗೆ ಇಲಾಖೆಯ ಅವಶ್ಯಕತೆಗೆ ಸಹಾಯಕವಾಗುವಂತೆ 04 ಲೆಕ್ಕಾಧಿಕಾರಿ, 06 ಉಪ ವಿದ್ಯುತ್ ಪರಿವೀಕ್ಷಕರು ಮತ್ತು 01 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲು ಕೋರಿ ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 04 ಲೆಕ್ಕಾಧಿಕಾರಿ ಹುದ್ದೆಗಳನ್ನು ಸೃಜಿಸಲು ಆರ್ಥಿಕ ಇಲಾಖೆಯು ಸಹಮತಿಯನ್ನು ನೀಡಿದೆ. ಆದ್ದರಿಂದ, ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ-1) ಬೆಂಗಳೂರು, ದಿನಾಂಕ: 03.11.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ 04 (ನಾಲ್ಕು) ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 602 ವೆ-1/2015 ದಿನಾಂಕ: 19.09.2015 ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಶಿವಕುಮಾರ್**

ಪೀಠಾಧಿಕಾರಿ,

ಇಂಧನ ಇಲಾಖೆ.

**PR. 698**

**SC. 50**

## COMMERCE & INDUSTRIES SECRETARIAT

**Sub**: Establishment of a "Solar Park" for Solar Power Generation at Pavagada Taluk, Tumakuru District.

M/s Karnataka Solar Power Development Corporation Ltd., (KSPDCL), which is a Public Limited Company – Joint Venture Company with equity stake of 50% each between Solar Energy Corporation of India (SECI), GoI and KREDL, GoK, has proposed to establish a "Solar Park" with all the infrastructure facilities for 2000 MW Solar Power Generation with an estimated total investment of around Rs. 14,800.00 crore generating employment to about 8,000 persons, in around 11,000 acres of land identified in 5 villages viz., Balasamudra, Tirumani, Kyataganacharlu, Vallur & Rayacharlu of Pavagada Taluk, Tumakuru District.

The project involves the development of Solar Park from KSPDCL, construction of 400 KV power grid system by Power Grid Corporation of India Ltd. (PGCIL) and Solar Power Generation plants by NTPC & SECI.

The proposal is approved by the Chairman of the State High Level Clearance Committee (SHLCC) and would be ratified in the subsequent meeting of SHLCC after placing it before the Land Audit Committee. Government has examined the project in all aspects.

Hence the following order.

**Government Order No.CI 234 SPI 2015,Bengaluru,Dated:29.10.2015**

Government is pleased to accord in-principle approval to the proposal of M/s Karnataka Solar Power Development Corporation Ltd., (KSPDCL) to establish a "Solar Park" with all the infrastructure facilities for 2000 MW Solar Power Generation with an estimated total investment of around Rs. 14,800.00 crore, at Pavagada Taluk, Tumakuru District, generating employment to about 8,000 persons with the following infrastructure assistances, incentives and concessions:

| | |
|---|---|
| **Land :** | Around 11,000 acres of land identified in 5 villages viz., Balasamudra, Tirumani, Kyataganacharlu, Vallur & Rayacharlu of Pavagada Taluk, Tumakuru District.<br>The total land identified includes around 254 Acres of Government land and balance land vests with private parties which the company intends to take on 30 year lease on yearly lease-rental basis.<br>Out of the 254 acres of Government land, 40 acres will be allotted to PGCIL and balance land will be in the possession of KSPDCL. |
| **Water :** | 1,110 KLPD to be met through digging of bore wells as per norms. |
| **Power :** | Required power will be obtained from BESCOM. |
| **Incentive & Concessions:** | As per applicable policy of the State. |

**Sanction of the above infrastructure facilities, incentives and concessions is subject to the following terms and conditions**:

1. **Environment**: M/s KSPDCL has to obtain Consent for Establishment and Consent for Operation from KSPCB and environmental clearance from MoEF, Govt. of India or the Dept of Forest, Ecology & Environment, Govt. of Karnataka, if applicable.
2. **Employment**: M/s KSPDCL shall comply with the provisions of Industrial Policy 2014-19 of Govt. of Karnataka. Prepare a plan for development of Human Resources required for the project, train local people and priority for employment in the project be given to the residents of these five villages. A copy of Human Resources Development plan shall be sent to the Commissioner for Industrial Development& Director of Industries and Commerce for monitoring.
3. **Vendor Development**: Wherever there is scope for vendor development for the project, M/s KSPDCL and / or the Solar Power Developers shall prepare a vendor development plan, develop local vendors and procure the required inputs if any from these local vendor units. A copy of the vendor development plan shall be sent to the Commissioner for Industrial Development & Director of Industries and Commerce for monitoring.
4. **Social Infrastructure Development:** M/s KSPDCL along with the Solar Power Developers are advised to take up social infrastructure development projects in the vicinity of the proposed location of the unit and comply with the stipulation of Company Act 2013. A copy of such projects shall be sent to the Commissioner for Industrial Development & Director of Industries and Commerce for monitoring.
5. **Others**:
   a) M/s KSPDCL shall adopt rainwater harvesting, suitable water conservation techniques, develop and maintain the water bodies within the project area.
   b) M/s KSPDCL shall take all statutory and other necessary clearances from the competent authorities including Government of India and shall submit milestones/progress in the implementation of the project regularly, which will be monitored by the Department.
   c) M/s KSPDCL shall provide at least one employment per family of land looser if any land is acquired for the Project.

This approval is valid for a period of **two years** from the date of issue of this Government Order.

By Order and in the name of the Governor of Karnataka,
**S. UMADEVI**
Desk Officer (Technical Cell),
Commerce & Industries Department.

**PR. 700**
**SC. 100**

## ಸಹಕಾರ ಸಚಿವಾಲಯ

**ವಿಷಯ:** 2015-16 ನೇ ಸಾಲಿಗೆ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿ ದರದಲ್ಲಿ ರೂ.3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡಲು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಸಿಆರ್‌ಡಿ/ಸಿಎಬಿ-1/1/2015-16, ದಿನಾಂಕ:20.05.2015.
3. ದಿನಾಂಕ:04.06.2015 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

2015–16 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರೂ.3 ಲಕ್ಷಗಳವರೆಗಿನ ಅಲ್ಪಾವಧಿ ಕೃಷಿ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ಹಾಗೂ ರೂ.10 ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲವನ್ನು ಶೇ.3ರ ಬಡ್ಡಿದರದಲ್ಲಿ ವಿತರಿಸುವ ಯೋಜನೆ ಮುಂದುವರೆಸಲಾಗುವುದೆಂದು ಘೋಷಿಸಲಾಗಿರುತ್ತದೆ.

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16 ನೇ ಸಾಲಿನ ಮುಂದುವರೆದ ಯೋಜನೆಯಾದ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ.73741.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16 ನೇ ಸಾಲಿಗೆ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿದರದಲ್ಲಿ ರೂ.3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡಲು ಯೋಜನೆಯ ಆದೇಶದಲ್ಲಿ ಕೆಲವು ಪ್ರಮುಖ ಷರತ್ತುಗಳನ್ನು ಅಳವಡಿಸಿ/ಮಾರ್ಪಡಿಸಿ ಸರ್ಕಾರಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಸಭೆಯ ನಡವಳಿಯಲ್ಲಿ ಅಲ್ಪಾವಧಿ ಸಾಲ ವಿತರಣೆ ಕುರಿತು ನಡವಳಿಗಳನ್ನು ನಡೆಸಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ:ಸಿಒ 183 ಸಿಎಲ್ಎಸ್ 2015, ದಿನಾಂಕ: 17.11.2015**

ರಾಜ್ಯದ ರೈತರಿಗೆ ಸಹಕಾರಿ ಸಂಸ್ಥೆಗಳು ಶೂನ್ಯ ಬಡ್ಡಿದರದಲ್ಲಿ ರೂ.3 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡುವ ಯೋಜನೆಯನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಜಾರಿಗೊಳಿಸಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

**ಷರತ್ತುಗಳು:**

1. ಈ ಯೋಜನೆಯು ಗೊತ್ತುಪಡಿಸಿದ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಅಂದರೆ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು, ಟಿಬೇಟಿಯನ್ ಸಹಕಾರ ಸಂಸ್ಥೆಗಳು, ಕೃಷಿ ಮತ್ತು ಕೃಷಿ ಸಂಬಂಧಿತ ಅಲ್ಪಾವಧಿ ಸಾಲಗಳನ್ನು ನೀಡುತ್ತಿರುವ ಲ್ಯಾಂಪ್ಸ್ ಸಹಕಾರ ಸಂಘಗಳು, ಪಿಕಾರ್ಡ್ ಬ್ಯಾಂಕುಗಳು ಮತ್ತು ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಅರ್ಹ ಎಂದು ಗುರುತಿಸುವ ಇತರೆ ಸಹಕಾರಿ ಸಂಸ್ಥೆಗಳು. (ಪಟ್ಟಣ ಸಹಕಾರ ಬ್ಯಾಂಕುಗಳು ನೀಡುವ ಸಾಲಗಳಿಗೆ ಈ ಯೋಜನೆ ಅನ್ವಯಿಸುವುದಿಲ್ಲ).
2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಸ್ಥಗಿತ/ಸಮಾಪನೆಗೊಂಡಿದ್ದಲ್ಲಿ ಅಂತಹ ಕಾರ್ಯವ್ಯಾಪ್ತಿಯಲ್ಲಿ ಮಾತ್ರ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಅಲ್ಪಾವಧಿ ಕೃಷಿ ಸಾಲಗಳನ್ನು ವಿತರಿಸತಕ್ಕದ್ದು. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ನೇರವಾಗಿ ವಿತರಿಸಿದ ಸಾಲಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಅನ್ವಯವಾಗುವ ಬಡ್ಡಿ ಸಹಾಯಧನದ ದರಕ್ಕಿಂತ ಶೇ.2 ರಷ್ಟು ಕಡಿಮೆ ಬಡ್ಡಿ ಸಹಾಯಧನ ಅನ್ವಯವಾಗುವುದು.
3. ಒಂದು ನಿರ್ಧಿಷ್ಟ ಬ್ಯಾಂಕಿನ ವ್ಯಾಪ್ತಿಯ ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ತನ್ನ ವ್ಯಾಪ್ತಿಯ ರೈತರಿಗೆ ಸಾಲ ವಿತರಿಸಲು ವಿಫಲವಾದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಪಕ್ಕದ ಜಿಲ್ಲೆಯ ಕೇಂದ್ರ ಸಹಕಾರ ಬ್ಯಾಂಕಿನ ಅಥವಾ ಅಪೆಕ್ಸ್ ಬ್ಯಾಂಕಿನ ಮೂಲಕ ಸಾಲ ವಿತರಿಸುವ ವ್ಯವಸ್ಥೆಯನ್ನು ಸಹಕಾರ ಸಂಘಗಳ ನಿಬಂಧಕರು ಮಾಡಲು ಕ್ರಮವಹಿಸತಕ್ಕದ್ದು.
4. ಸ್ಕೇಲ್ ಆಫ್ ಫೈನಾನ್ಸ್ ಮತ್ತು ಬೆಳೆ ವಿಮೆ ಆಧಾರದ ಮೇಲೆ ಮಂಜೂರಾದ ಸಾಲದ ಮಿತಿಗೆ ಮಾತ್ರ ಬಡ್ಡಿ ರಿಯಾಯಿತಿಯು ಅನ್ವಯವಾಗುವುದು. ಇತರೆ ಉದ್ದೇಶಗಳಿಗೆ (ಉದಾ:Post harvest ಉದ್ದೇಶಗಳು ಇತ್ಯಾದಿಗಳಿಗೆ ನೀಡುವ ಹೆಚ್ಚುವರಿ ಸಾಲಗಳಿಗೆ ನೀಡಿರುವ ಹೆಚ್ಚುವರಿ ಸಾಲಗಳಿಗೆ ಬಡ್ಡಿ ರಿಯಾಯಿತಿಯು ಇರುವುದಿಲ್ಲ).
5. ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳಿಗೆ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಂದ ಮಂಜೂರಾದ ಶೇ.50 ರಷ್ಟು ಹೆಚ್ಚುವರಿ ಸಾಲದ ಮೊತ್ತವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಮೂಲಕ ರಿಯಾಯಿತಿ ಬಡ್ಡಿ ದರದಲ್ಲಿ ಇದುವರೆಗೂ ಸಾಲ ಪಡೆಯದೇ ಇರುವ ಹೊಸ ಸದಸ್ಯರಿಗೆ ನೀಡುವುದು. ಪ್ಯಾಕ್ಸ್‌ಗಳ ಕಾರ್ಯ ವ್ಯಾಪ್ತಿಯಲ್ಲಿನ ಎಲ್ಲಾ ಹೊಸ ರೈತ ಸದಸ್ಯರಿಗೆ ಸಾಲ ನೀಡಿದ ನಂತರ ಉಳಿದಲ್ಲಿ ಹೆಚ್ಚುವರಿ ಸಾಲದ ಮೊತ್ತವನ್ನು ಹಳೆಯ ಸಾಲಗಾರ ರೈತರಿಗೆ ಸಾಲ ನೀಡಲು ಬಳಸತಕ್ಕದ್ದು.
6. ಸಾಲ ನೀಡುವ ಸಂಸ್ಥೆಗಳು ಪ್ರಾಥಮಿಕ ಸಹಕಾರಿ ಸಂಸ್ಥೆಗಳಿಂದ ಮತ್ತು ಪ್ರಾಥಮಿಕ ಸಹಕಾರಿ ಸಂಸ್ಥೆಗಳು ರೈತ ಸದಸ್ಯರಿಂದ ಯಾವುದೇ ಪ್ರಕ್ರಿಯಾ ಶುಲ್ಕ ಅಥವಾ ಸೇವಾ ಶುಲ್ಕ ಹೆಸರಿನಲ್ಲಿ ಯಾವುದೇ ಹಣವನ್ನು ಸಂಗ್ರಹಿಸತಕ್ಕದ್ದಲ್ಲ.
7. "ಶೂನ್ಯ" ಬಡ್ಡಿ ದರವು ರೂ.3.00ಲಕ್ಷದವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ರೂ.3.00 ಲಕ್ಷಗಳಿಗಿಂತ ಹೆಚ್ಚಿನ ಸಾಲಗಳ ಸಂಪೂರ್ಣ ಮೊತ್ತಕ್ಕೆ ಸಾಮಾನ್ಯ ಬಡ್ಡಿ ದರ ಅನ್ವಯವಾಗುತ್ತದೆ.
8. ಬೆಳೆ ಸಾಲಗಳನ್ನು ಸಕಾಲಿಕವಾಗಿ ಮರುಪಾವತಿಸಿದ ರೈತರಿಗೆ ಕೇಂದ್ರ ಸರ್ಕಾರ ನಬಾರ್ಡಿನ ಮುಖಾಂತರ ನೀಡುವ (ಶೇಕಡಾ 3ರಷ್ಟು) ಪ್ರೋತ್ಸಾಹಧನವನ್ನು ಈ ಯೋಜನೆಗೆ ಅಳವಡಿಸಿಕೊಂಡು ಸರ್ಕಾರ ಭರಿಸುವ ಬಡ್ಡಿ ಸಹಾಯಧನದ ದರವನ್ನು ನಿಗದಿಪಡಿಸಿ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

9. ಈ ಬಡ್ಡಿ ದರವು ದಿನಾಂಕ:01.04.2015ರಿಂದ ದಿನಾಂಕ:31.03.2016ರವರೆಗೆ ನೀಡಲಾದ (sanctioned and disbursed) ಕೃಷಿ ಅಲ್ಪಾವಧಿ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.

10. ರೈತರು ಸಹಕಾರಿ ಸಂಸ್ಥೆಗಳಿಗೆ ಮರುಪಾವತಿ ಗಡುವಿನೊಳಗಾಗಿ ಮರುಪಾವತಿಸಿದರೆ ಮಾತ್ರ ಈ ಸೌಲಭ್ಯವು ದೊರೆಯುತ್ತದೆ. ನಿಗದಿತ ಗಡುವಿನ ನಂತರ ಮರುಪಾವತಿಸಿದ ಸಾಲಗಳಿಗೆ ಸಾಲ ಪಡೆದ ದಿನಾಂಕದಿಂದ ಸಾಮಾನ್ಯ ಬಡ್ಡಿ ದರದಲ್ಲಿ ರೈತರು ಸಾಲ ಮರುಪಾವತಿಸಲು ಜವಾಬ್ದಾರರಾಗುತ್ತಾರೆ. ಬಡ್ಡಿ ರಿಯಾಯಿತಿಯನ್ನು ಗಡುವು ದಿನಾಂಕ ಅಥವಾ ಸಾಲ ಮರುಪಾವತಿಸಲಾದ ದಿನಾಂಕ ಇವುಗಳಲ್ಲಿ ಯಾವುದು ಮೊದಲೋ ಆ ದಿನಾಂಕದವರೆಗೆ ಪಾವತಿಸಲಾಗುವುದು.

11. ಈ ಯೋಜನೆಯು ಸಹಕಾರಿ ಸಂಸ್ಥೆಗಳು ನೀಡುವ ಕೃಷಿಯೇತರ (Non-agricultural loans) ಸಾಲಗಳಿಗೆ ಅನ್ವಯವಾಗುವುದಿಲ್ಲ.

12. ಅಲ್ಪಾವಧಿ ಬೆಳೆ ಸಾಲಗಳನ್ನು ನೀಡುತ್ತಿರುವ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಘಗಳು, ಲ್ಯಾಂಪ್ಸ್‌ಗಳಿಗೆ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮೂಲಕ ಪಿಕಾರ್ಡ್ ಬ್ಯಾಂಕುಗಳು ಕಸ್ಕಾರ್ಡ್ ಬ್ಯಾಂಕಿನ ಮೂಲಕ ಬಡ್ಡಿ ಸಹಾಯಧನವನ್ನು ಬಿಡುಗಡೆ ಮಾಡಲಾಗುತ್ತದೆ.

13. ಕೇಂದ್ರ ಸರ್ಕಾರದಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸಾಲ ನೀಡುವ ಡಿಸಿಸಿ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳು ನೇರವಾಗಿ ತಮ್ಮ ಆದಾಯ ಖಾತೆಗೆ ಜಮಾ ಪಡೆಯತಕ್ಕದ್ದು.

14. ಒಂದು ವೇಳೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸಂಪನ್ಮೂಲಗಳನ್ನು ಕೃಷಿ ಅಲ್ಪಾವಧಿ ಸಾಲಗಳಲ್ಲಿ ತೊಡಗಿಸಿದಾಗ ಅಂತಹ ಸಾಲಗಳ ಪ್ರಮಾಣಕ್ಕನುಗುಣವಾಗಿ ರಾಜ್ಯ/ಕೇಂದ್ರ ಸರ್ಕಾರಗಳಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಡಿಸಿಸಿ ಬ್ಯಾಂಕುಗಳು ಗೊತ್ತುಪಡಿಸಿದ ಶೇಕಡ ಪ್ರಮಾಣಕ್ಕನುಗುಣವಾಗಿ ಆಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ವರ್ಗಾಯಿಸತಕ್ಕದ್ದು.

15. ಪಿಕಾರ್ಡ್ ಬ್ಯಾಂಕುಗಳು ಇಂತಹ ಸಾಲಗಳನ್ನು ತನ್ನ ಸ್ವಂತ ಸಂಪನ್ಮೂಲದಿಂದ ಒದಗಿಸಿದಾಗ ಅಷ್ಟರಮಟ್ಟಿಗೆ ಕಸ್ಕಾರ್ಡ್ ಬ್ಯಾಂಕ್ ಸರ್ಕಾರದಿಂದ ಪಡೆಯುವ ಬಡ್ಡಿ ಸಹಾಯಧನವನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಕಡ್ಡಾಯವಾಗಿ ಒದಗಿಸತಕ್ಕದ್ದು.

16. ಒಂದು ಪಕ್ಷ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳ ಬದಲಾಗಿ ವಾಣಿಜ್ಯ ಬ್ಯಾಂಕುಗಳಿಂದ ಕೃಷಿ ಸಾಲ ಪಡೆದು ರೈತರಿಗೆ ವಿತರಣೆ ಮಾಡಿದಲ್ಲಿ ಸರ್ಕಾರದಿಂದ ಬಿಡುಗಡೆಯಾಗುವ ಬಡ್ಡಿ ಸಹಾಯಧನದ ಹೊಂದಾಣಿಕೆ ವಿಷಯದಲ್ಲಿ ಮೇಲೆ ಸೂಚಿಸಿದ ನಿಯಮಗಳನ್ನೇ ಪಾಲಿಸತಕ್ಕದ್ದು.

17. ಕೇಂದ್ರ ಸರ್ಕಾರದಿಂದ ಲಭ್ಯವಾಗುವ ಬಡ್ಡಿ ಸಹಾಯಧನಕ್ಕೆ ಸಂಬಂಧಿಸಿದಂತೆ ಬಿಲ್ಲುಗಳನ್ನು ತಯಾರಿಸಿ ಸಂಬಂಧಪಟ್ಟ ಪತ್ತಿನ ಸಹಕಾರ ಸಂಘಗಳು/ಬ್ಯಾಂಕುಗಳು ಮಂಜೂರಾತಿಗಾಗಿ ಗೊತ್ತುಪಡಿಸಿದ ಗಡುವಿನೊಳಗಾಗಿ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿಗೆ ಸಲ್ಲಿಸಿದ ಪಕ್ಷದಲ್ಲಿ ಮಾತ್ರ ರಾಜ್ಯ ಸರ್ಕಾರದಿಂದ ಬಡ್ಡಿ ಸಹಾಯಧನವನ್ನು ಬಿಡುಗಡೆ ಮಾಡಲಾಗುವುದು.

18. ಪತ್ತಿನ ಸಹಕಾರ ಸಂಘಗಳು/ಬ್ಯಾಂಕುಗಳು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ಸಂಬಂಧಪಟ್ಟ ಸಾಲಗಳ ವಸೂಲಾತಿಯ ಪ್ರಮಾಣವನ್ನು ಆಧರಿಸಿ ಪ್ರತಿ ತ್ರೈಮಾಸಿಕವಾಗಿ ಕ್ಲೇಮು ಬಿಲ್ಲುಗಳನ್ನು ಸಿದ್ದಪಡಿಸಿ ಗೊತ್ತುಪಡಿಸಿದ ಮಾರ್ಗದಲ್ಲಿ ನಿಬಂಧಕರ ಮಂಜೂರಾತಿಗಾಗಿ ಈ ಕೆಳಕಾಣಿಸಿದಂತೆ ಬೇಡಿಕೆಯನ್ನು ಸಲ್ಲಿಸತಕ್ಕದ್ದು.

   i) ಸಹಕಾರ ಸಂಘ/ಬ್ಯಾಂಕುಗಳಿಗೆ ಸಂಬಂಧಪಟ್ಟಂತೆ ತ್ರೈಮಾಸಿಕವಾಗಿ ಆಯಾ ಸಂಘ/ಬ್ಯಾಂಕುಗಳ ಕಾರ್ಯನಿರ್ವಹಣಾಧಿಕಾರಿಗಳು ಬಿಲ್ಲುಗಳನ್ನು ಮರುಪಾವತಿ ಆಧಾರದ ಮೇಲೆ ಜಾರಿಯಲ್ಲಿರುವ ಸರ್ಕಾರದ ಆದೇಶದಂತೆ ತಯಾರಿಸಬೇಕು ಮತ್ತು ಅದರಲ್ಲಿರುವ ವಿವರಗಳು ಸತ್ಯವಾಗಿರುತ್ತವೆ ಎಂದು ಪ್ರಮಾಣೀಕರಿಸಬೇಕು.

   ii) ತದನಂತರ ಪ್ರತಿಯೊಂದು ಸಹಕಾರ ಸಂಘ/ಬ್ಯಾಂಕುಗಳಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಣಾಧಿಕಾರಿಯವರು ತಯಾರಿಸಿರುವ ಬಡ್ಡಿ ಬಿಲ್ಲುಗಳನ್ನು ಸಂಘದಲ್ಲಿನ ದಾಖಲೆಗಳನ್ವಯ ಸರಿಯಾಗಿರುತ್ತವೆ ಎಂದು ಸಾಲ ನೀಡುತ್ತಿರುವ ಬ್ಯಾಂಕಿನ ಕ್ಷೇತ್ರ ಸಿಬ್ಬಂದಿ ಅಥವಾ ಬ್ಯಾಂಕಿನ ನಿರೀಕ್ಷಕರು ದೃಢೀಕರಿಸಬೇಕು.

   iii) ಆಯಾ ತಾಲ್ಲೂಕಿನಲ್ಲಿರುವ ಸಹಕಾರ ಅಭಿವೃದ್ಧಿ ಅಧಿಕಾರಿಯವರು ಅಥವಾ ಈ ಕೆಲಸಕ್ಕಾಗಿ ನಿಯೋಜಿತಗೊಂಡ ಅಧಿಕಾರಿಯವರು ಪುನ: ಸಂಘಗಳಲ್ಲಿರುವ ದಾಖಲೆಗಳನ್ನು ಪರಿಶೀಲಿಸಿ ದೃಢೀಕರಿಸಬೇಕು.

   iv) ಸಂಘಗಳ/ಬ್ಯಾಂಕುಗಳ ಕಾರ್ಯವ್ಯಾಪ್ತಿಯಲ್ಲಿರುವ ಹಣಕಾಸು ನೀಡುವ ಶಾಖೆಯ ವ್ಯವಸ್ಥಾಪಕರು ಹಾಗೂ ಅವರೊಂದಿಗೆ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಬಿಲ್ಲುಗಳನ್ನು ಪರಿಶೀಲಿಸಿ ಸರಿ ಇರುತ್ತವೆ ಎಂದು ದೃಢೀಕರಿಸಿ ಮೇಲು ರುಜು ಮಾಡಿ ಸಹಕಾರ ಸಂಘಗಳ ಜಿಲ್ಲಾ ಉಪನಿಬಂಧಕರಿಗೆ ಸಲ್ಲಿಸತಕ್ಕದ್ದು.

   v) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿಗೆ ಮತ್ತು ವಾಣಿಜ್ಯ ಬ್ಯಾಂಕಿಗೆ ಅಧ್ಯರ್ಪಿಸಲ್ಪಟ್ಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಘಗಳು, ಲ್ಯಾಂಪ್ಸ್‌ಗಳು ಸಲ್ಲಿಸಿದ ಬಿಲ್ಲುಗಳನ್ನು ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಸಂಬಂಧಿಸಿದ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

   vi) ಅದೇ ರೀತಿಯಾಗಿ ಪಿಕಾರ್ಡ್ ಬ್ಯಾಂಕಿಗೆ ಸಂಬಂಧಿಸಿದ ಬಿಲ್ಲುಗಳನ್ನು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸತಕ್ಕದ್ದು.

vii) ತ್ರೈಮಾಸಿಕ ಮುಗಿದ ಒಂದು ತಿಂಗಳೊಳಗಾಗಿ ಜಿಲ್ಲೆಯಲ್ಲಿನ ಪ್ರತಿಯೊಂದು ಅರ್ಹ ಸಹಕಾರ ಸಂಘಗಳು ಬಿಲ್ಲುಗಳನ್ನು ತಯಾರಿಸಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ/ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸುವ ಜವಾಬ್ದಾರಿಯನ್ನು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ವಹಿಸತಕ್ಕದ್ದು.

viii) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ಪ್ರತ್ಯೇಕವಾಗಿ ಕ್ರೋಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ದೃಡೀಕರಿಸಿ ಮಂಜೂರಾತಿಗಾಗಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

ix) ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರು ಬಿಲ್ಲುಗಳನ್ನು ಕ್ರೋಢೀಕರಿಸಿ ವ್ಯವಸ್ಥಾಪಕ ನಿರ್ದೇಶಕರು ಕಸ್ಕಾರ್ಡ್ ಬ್ಯಾಂಕ್ ಇವರಿಗೆ ಸಲ್ಲಿಸತಕ್ಕದ್ದು. ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಬಿಲ್ಲುಗಳನ್ನು ದೃಢೀಕರಿಸಿ ಮಂಜೂರಾತಿಗಾಗಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

19. ಈ ಸಾಲಿನಲ್ಲಿ ಸಾಲ ವಿತರಿಸುವ ರೈತರ ಪೈಕಿ ಶೇಕಡಾ 25 ರಷ್ಟು ಸಾಲವನ್ನು ಹೊಸದಾಗಿ ಸಾಲ ಪಡೆಯುವ ರೈತರಿಗೆ ಕಡ್ಡಾಯವಾಗಿ ನೀಡತಕ್ಕದ್ದು.

20. ಒಟ್ಟಾರೆ ವಿತರಿಸಿದ ಸಾಲದ ಪೈಕಿ ಶೇಕಡಾ 24.10 ರಷ್ಟು ಸಾಲವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಸಾಲ ನೀಡುವುದು ಕಡ್ಡಾಯವಾಗಿರುತ್ತದೆ.

21. ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 101(ಬಿ)(5)(111)ರಡಿಯ ಟಿಪ್ಪಣಿ-2 ಹಾಗೂ ಪರಿಚ್ಛೇದ 101(ಬಿ)(6)(11)ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.

22. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

23. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

24. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡುವ ಸೂಚನೆಗಳನ್ನು ಸಂಬಂಧಿಸಿದ ಎಲ್ಲ ಸಹಕಾರ ಸಂಸ್ಥೆಗಳು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ದಿನಾಂಕ:08.05.2015 ಮತ್ತು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 328 ವೆಚ್ಚ-2/2015, ದಿನಾಂಕ:11.11.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 716**
**SC. 100**

## ಸಹಕಾರ ಸಚಿವಾಲಯ

**ವಿಷಯ:** 2014-15 ನೇ ಸಾಲಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಹಾಗೂ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳು ಸ್ವಸಹಾಯ ಗುಂಪುಗಳಿಗೆ ಶೇ.4ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಡಿಯಲ್ಲಿ ಬಡ್ಡಿ ಸಹಾಯಧನ ದರ ನಿಗಧಿಪಡಿಸಿ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಒ 208 ಸಿಎಲ್‌ಎಸ್ 2014, ದಿನಾಂಕ:19.08.2014.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 199 ಸಿಎಲ್‌ಎಸ್ 2014, ದಿನಾಂಕ:18.06.2014.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ ಕೆಎಂಇ-8/05/2014-15, ದಿನಾಂಕ:02.06.2015 & 19.08.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇ.4.00 ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯನ್ನು 2014-15 ನೇ ಸಾಲಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2013-14 ನೇ ಸಾಲಿಗೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಹಾಗೂ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳ ಮೂಲಕ ಶೇ.4ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಡಿ ಬಡ್ಡಿ ಸಹಾಯಧನ ದರ ನಿಗಧಿಪಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2014–15ನೇ ಸಾಲಿಗೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳು ಶೇ 4ರ ಬಡ್ಡಿ ದರದಲ್ಲಿ ವಿತರಿಸಿದ ಸಾಲಗಳಿಗೆ ಕ್ರಮವಾಗಿ ಶೇ 8.75 ಮತ್ತು ಶೇ 7.75ರ ದರದಲ್ಲಿ ಬಡ್ಡಿ ಸಹಾಯಧನ ನಿಗಧಿಪಡಿಸಲು ಮತ್ತು ಸ್ವಸಹಾಯ ಗುಂಪುಗಳಿಂದ ವಸೂಲಿ ಮಾಡಿದ ಶೇ.4 ರ ಬಡ್ಡಿದರವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ಕ್ರಮವಾಗಿ ಶೇ.2.25:1.75 ಅನುಪಾತದಲ್ಲಿ ಮಾರ್ಜಿನ್ ಮೊತ್ತವನ್ನು ನಿಗಧಿಪಡಿಸಲು ಕೋರಿರುತ್ತಾರೆ.

ನಿಬಂಧಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ:ಸಿಒ 199 ಸಿಎಲ್‌ಎಸ್ 2015, ದಿನಾಂಕ: 15.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2014–15ನೇ ಸಾಲಿಗೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳ ಮೂಲಕ ಶೇ.4 ರ ಬಡ್ಡಿ ದರದಲ್ಲಿ ವಿತರಿಸಿದ ಸಾಲಗಳಿಗೆ ಕ್ರಮವಾಗಿ ಶೇ 8.25 ಮತ್ತು ಶೇ 7.25 ರ ದರದಲ್ಲಿ ಬಡ್ಡಿ ಸಹಾಯಧನವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ಸ್ವಸಹಾಯ ಗುಂಪುಗಳಿಂದ ವಸೂಲಿ ಮಾಡಿದ ಶೇ.4 ರ ಬಡ್ಡಿದರವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ಕ್ರಮವಾಗಿ ಶೇ.2.25:1.75 ಅನುಪಾತದಲ್ಲಿ ಮಾರ್ಜಿನ್ ಮೊತ್ತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 312 ಇಎಕ್ಸ್‌ಪಿ–2/2015, ದಿನಾಂಕ:07.10.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

PR. 696
SC. 50

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002, ದಿನಾಂಕ 31.05.2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002, ದಿನಾಂಕ 19.12.2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015 ದಿನಾಂಕ: 09.04.2015.
4. ಸರ್ಕಾರ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015 ದಿನಾಂಕ: 02.05.2015, 18.05.2015, 04.06.2015, 06.07.2015 ಮತ್ತು 05.08.2015
5. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ: ಕೆಇಪಿಜಿಟಿ/ಪಿ14/2015–16/484–88 ದಿನಾಂಕ: 19.08.2015.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ₹. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ₹. 228.00 ಕೋಟಿಗಳನ್ನು ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.

4. ಮೇಲೆ (5)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಸೆಪ್ಟೆಂಬರ್ 2015ರ ಮಾಹೆಗೆ ₹. 74.00 ಕೋಟಿಗಳನ್ನು ಸೆಪ್ಟೆಂಬರ್ 2015ರ ಮೊದಲ ವಾರದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಸೆಪ್ಟೆಂಬರ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 01.09.2015.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಸೆಪ್ಟೆಂಬರ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 46.00 ಕೋಟಿ (ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.04.2015ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

**PR. 631** ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಸೋಲಾರ್ ಪಾರ್ಕ್‌ಗಳನ್ನು ಸ್ಥಾಪಿಸಲು ಪ್ರಸ್ತಾವನೆಗಳಿಗೆ ಶುಲ್ಕ ನಿಗಧಿಪಡಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಸೌರ ವಿದ್ಯುತ್ ನೀತಿ 2014–21 ಅಧಿಸೂಚನೆ ಸಂಖ್ಯೆ: ಇಎನ್ 21 ವಿಎಸ್‌ಸಿ 2014, ದಿನಾಂಕ: 22.05.2014.
2. ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ ರವರ ಪತ್ರ ಸಂಖ್ಯೆ: 30/26/2014–15/NSM ದಿನಾಂಕ: 06.07.2015.
3. ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್ ರವರ ಪತ್ರ ಸಂಖ್ಯೆ: KREDL/07/SP/ED/2015-16/2722, ದಿನಾಂಕ: 10.08.2015.

**ಪ್ರಸ್ತಾವನೆ:**

ಭಾರತ ಸರ್ಕಾರದ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದ (ಎಂ.ಎನ್.ಆರ್.ಇ) ಮೇಲೆ ಓದಲಾದ (2)ರ ಮಾರ್ಗಸೂಚಿಯಂತೆ ಮತ್ತು ರಾಜ್ಯದ ಸೌರ ವಿದ್ಯುತ್ ನೀತಿ 2014–21ರಂತೆ ರಾಜ್ಯದಲ್ಲಿ ಸೋಲಾರ್ ಪಾರ್ಕ್ ಸ್ಥಾಪಿಸಲು ಉದ್ದೇಶಿಸಿದೆ. ಇದರಂತೆ ರಾಜ್ಯದಲ್ಲಿ ಸೋಲಾರ್ ಪಾರ್ಕ್ ಅಭಿವೃದ್ಧಿಗಾಗಿ ಈಗಾಗಲೇ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ (ಕೆ.ಆರ್.ಇ.ಡಿ.ಎಲ್) ಮತ್ತು ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿರುವ M/S. Solar Energy Corporation of India ಜಂಟಿ ಸಹಯೋಗದೊಂದಿಗೆ ಕರ್ನಾಟಕ ಸೋಲಾರ್ ಪವರ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯನ್ನು ರಚಿಸಲಾಗಿರುತ್ತದೆ. ಸದರಿ ಕಂಪನಿಯು ರಾಜ್ಯದಲ್ಲಿ ಸೋಲಾರ್ ಪಾರ್ಕ್‌ಗಳನ್ನು ಅಭಿವೃದ್ಧಿಪಡಿಸುತ್ತಿದೆ. ಇದಲ್ಲದೆ ಸೋಲಾರ್ ಪಾರ್ಕ್‌ಗಳನ್ನು ಕಾರ್ಯಸಾಧ್ಯವಾದ ಪಿಪಿಪಿ (Public Private Partnership) / ಖಾಸಗಿ ಒಡೆತನದ/ಇತರೆ ಮಾಧರಿಯಲ್ಲಿ ಅಭಿವೃದ್ಧಿದಾರರು ಸ್ಥಾಪಿಸಲು ಸೌರ ನೀತಿಯಲ್ಲಿ ಉದ್ದೇಶಿಸಿದೆ.

ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್ ರವರು ಮೇಲೆ ಓದಲಾದ (3)ರಲ್ಲಿ ಸೋಲಾರ್ ಪಾರ್ಕ್‌ಗಳನ್ನು ಸ್ಥಾಪಿಸಲು ಅಭಿವೃದ್ಧಿದಾರರು ಕೆ.ಆರ್.ಇ.ಡಿ.ಎಲ್ ಸಂಸ್ಥೆಯನ್ನು ಸಂಪರ್ಕಿಸುತ್ತಿದ್ದಾರೆ ಎಂದು ವರದಿ ಮಾಡಿರುತ್ತಾರೆ ಹಾಗೂ ಈ ಸಂಬಂಧ ಕೆ.ಆರ್.ಇ.ಡಿ.ಎಲ್‌ಗೆ ಪಾವತಿಸಬೇಕಾದ ಅರ್ಜಿ ಶುಲ್ಕ ಮತ್ತು ಫೆಸಿಲಿಟೇಷನ್ ಶುಲ್ಕವನ್ನು ನಿಗಧಿಪಡಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್ ರವರ ಪ್ರಸ್ತಾವನೆಯಂತೆ ಹಾಗೂ ಸೌರ ವಿದ್ಯುತ್ ನೀತಿ 2014–21ರನ್ವಯ, ಸರ್ಕಾರವು ಪಿಪಿಪಿ/ಖಾಸಗಿ ಒಡೆತನ/ಇತರೆ ಮಾಧರಿಯಲ್ಲಿ ಸೋಲಾರ್ ಪಾರ್ಕ್‌ಗಳನ್ನು ಸ್ಥಾಪಿಸುವ ಪ್ರಸ್ತಾವನೆಗಳಿಗೆ ಶುಲ್ಕ ನಿಗಧಿಪಡಿಸುವ ಅವಶ್ಯಕತೆಯನ್ನು ಮನಗೊಂಡು ಈ ಕೆಳಕಂಡಂತೆ ನಿಗಧಿಪಡಿಸಿ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 26 ವಿಎಸ್‌ಇ 2015, ಬೆಂಗಳೂರು, ದಿನಾಂಕ: 19.10.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಪಿಪಿಪಿ /ಖಾಸಗಿ ಒಡೆತನ/ಇತರೆ ಮಾದರಿಯಲ್ಲಿ ಸೋಲಾರ್ ಪಾರ್ಕ್‌ಗಳನ್ನು ಸ್ಥಾಪಿಸುವ ಪ್ರಸ್ತಾವನೆಗಳಿಗೆ ಪ್ರತಿ ಸೋಲಾರ್ ಪಾರ್ಕಿಗೆ ₹. 1 ಲಕ್ಷ ದಂತೆ, ಅರ್ಜಿ ಶುಲ್ಕ ನಿಗಧಿಪಡಿಸಿ ಆದೇಶಿಸಿದೆ.

**ಷರತ್ತುಗಳು:**

1. ಸೋಲಾರ್ ಪಾರ್ಕಿನಲ್ಲಿ, ಸೌರ ಶಕ್ತಿ ಉತ್ಪಾದನಾ ಘಟಕಗಳನ್ನು ಸ್ಥಾಪಿಸುವ ಅಭಿವೃದ್ಧಿದಾರರು ಫೆಸಿಲಿಟೇಷನ್ ಶುಲ್ಕ ಪ್ರತಿ ಮೆಗಾವ್ಯಾಟ್‌ಗೆ, ಸೌರ ವಿದ್ಯುತ್ ನೀತಿ 2014–21ರಲ್ಲಿ ತಿಳಿಸಿರುವಂತೆ ಪಾವತಿಸುವುದು.
2. ಉಳಿದಂತೆ ಇತರೆ ಮಾನದಂಡಗಳು ಸೌರ ವಿದ್ಯುತ್ ನೀತಿ 2014–21ರಂತೆ ಅನ್ವಯವಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್.ಯಡ್ರಾವಿ,**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

PR. 647

## ಕಾರ್ಮಿಕ ಸಚಿವಾಲಯ

**ವಿಷಯ:–** ಹೈದರಾಬಾದ್– ಕರ್ನಾಟಕ ಪ್ರದೇಶದ ಕಲಬುರಗಿಯಲ್ಲಿ ಕಾರ್ಖಾನೆಗಳ ಜಂಟಿ ನಿರ್ದೇಶಕರು ಹಾಗೂ ಕಾರ್ಖಾನೆಗಳ ಉಪ ನಿರ್ದೇಶಕರು ಹುದ್ದೆಗಳನ್ನು ಸೃಜಿಸಿ ಕಛೇರಿಗಳನ್ನು ಸ್ಥಾಪಿಸುವ ಮತ್ತು ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಕಲಬುರಗಿ ವಿಭಾಗ, ಕಲಬುರಗಿ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:–** ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಸ್ವಾಸ್ಥ್ಯ ಇಲಾಖೆ, ಬೆಂಗಳೂರು ರವರ ಪ್ರಸ್ತಾವನೆ ಸಂಖ್ಯೆ: ಇಎಸ್‌ಟಿ–1/ ಆರ್‌ಪಿಪಿ /ಸಿಆರ್–26/2013–14, ದಿನಾಂಕ: 21–03–2014 ಮತ್ತು ದಿನಾಂಕ 02–12–2014

**ಪ್ರಸ್ತಾವನೆ:–**

ಮೇಲೆ ಓದಲಾದ ದಿನಾಂಕ: 21–03–2014ರ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ಇವರು, ಭಾರತ ಸರ್ಕಾರವು ಹೈದರಾಬಾದ್ – ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿರುವ ಜನರಿಗೆ ಅನುಚ್ಛೇದ 371(ಜೆ)ರಲ್ಲಿ ಮೀಸಲಾತಿಯನ್ನು ಕಲ್ಪಿಸಿ ವಿಶೇಷ ಸ್ಥಾನಮಾನವನ್ನು ನೀಡಿದೆ. ಹೈದರಾಬಾದ್ – ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ರಾಜ್ಯ ಮಟ್ಟದ ಸ್ಥಳೀಯ ವೃಂದ, ಪ್ರಾದೇಶಿಕ ಸ್ಥಳೀಯ ವೃಂದ ಮತ್ತು ಸ್ಥಳೀಯ ವೃಂದಗಳನ್ನು ರಚಿಸಿ ಅಧಿಸೂಚಿಸಲಾಗಿದೆ ಹಾಗೂ ರೋಸ್ಟರ್ ಅನ್ನು ನಿಗಧಿಪಡಿಸಿ, ಸಿಬ್ಬಂದಿ ಹಂಚಿಕೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆಯೆಂದು, ಹೈದರಾಬಾದ್ – ಕರ್ನಾಟಕ ಪ್ರದೇಶದಲ್ಲಿ 6 ಜಿಲ್ಲೆಗಳು (ಕಲಬುರಗಿ, ರಾಯಚೂರು, ಬಳ್ಳಾರಿ, ಕೊಪ್ಪಳ, ಯಾದಗೀರ್ ಹಾಗೂ ಬೀದರ್) ಬರುತ್ತಿದ್ದು, ಈ ಇಲಾಖೆಗೆ ಸಂಬಂಧಿಸಿದಂತೆ ಕಲಬುರಗಿ, ರಾಯಚೂರು, ಬಳ್ಳಾರಿ ಜಿಲ್ಲೆಗಳಲ್ಲಿ ಈಗಾಗಲೇ ಕಛೇರಿಗಳು ಕಾರ್ಯನಿರ್ವಹಿಸುತ್ತಿದ್ದು, ಕೊಪ್ಪಳ ಜಿಲ್ಲೆಯಲ್ಲಿ ಹೊಸದಾಗಿ ಕಛೇರಿಯನ್ನು ಸ್ಥಾಪಿಸಲು ಪ್ರಸ್ತಾಪಿಸಿರುತ್ತಾರೆ.

ಹೈದರಾಬಾದ್ – ಕರ್ನಾಟಕ ಪ್ರದೇಶ ಒಳಗೊಂಡಂತೆ ಉತ್ತರ ಕರ್ನಾಟಕ ಪ್ರದೇಶದಲ್ಲಿ ಈಗಾಗಲೇ ದೊಡ್ಡ ದೊಡ್ಡ ಸಿಮೆಂಟ್ ಕಾರ್ಖಾನೆಗಳು ಅಸ್ತಿತ್ವದಲ್ಲಿದ್ದು, ವಿದ್ಯುತ್ ಉತ್ಪಾದನಾ ಸ್ಥಾವರಗಳೂ ಸಹ ಕಾರ್ಯನಿರ್ವಹಿಸುತ್ತಿರುತ್ತವೆ ಹಾಗೂ NTPC (National Power Corporation) ರವರು 4,000 MW ಸಾಮರ್ಥ್ಯದ power plant ನ್ನು ಸ್ಥಾಪಿಸಲು ಉದ್ದೇಶಿಸಿರುತ್ತಾರೆ. ಈ ಉದ್ಯಮಗಳ ಸ್ಥಾಪನೆ ಮತ್ತು ನೋಂದಣಿಗೆ ಬೆಂಗಳೂರು ಕೇಂದ್ರ ಕಛೇರಿಯಿಂದ ಅನುಮತಿ/clearance ಗಾಗಿ ಅಲ್ಲಿಂದ ಬೆಂಗಳೂರಿಗೆ ಬರಬೇಕಾಗಿರುತ್ತದೆ. ಉದ್ದಿಮೆದಾರರಿಗೆ ಅನುಕೂಲ ಹಾಗೂ ಶೀಘ್ರವಾಗಿ ಅನುಮತಿ ದೊರಕುವ ನಿಟ್ಟಿನಲ್ಲಿ ಹಾಗೂ ಈ ಪ್ರದೇಶದ ಅಭಿವೃದ್ಧಿ ದೃಷ್ಟಿಯಲ್ಲಿ ಅಧಿಕಾರ ವಿಕೇಂದ್ರೀಕರಣ ಮಾಡಿ ಜಂಟಿ ನಿರ್ದೇಶಕರ ಮಟ್ಟದ ಉಸ್ತುವಾರಿ ಅಧಿಕಾರಿಯ ಕಛೇರಿ ಸ್ಥಾಪಿಸುವ ಅಗತ್ಯವಿರುತ್ತದೆಂದು ಪ್ರಸ್ತಾಪಿಸಿರುತ್ತಾರೆ.

ಭಾರತ ಸರ್ಕಾರವು 1996 ರಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಎಂಬ ಕಾಯ್ದೆಯನ್ನು ಅಸಂಘಟಿತ ವಲಯದಲ್ಲಿನ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ತೊಡಗಿರುವ ಕಾರ್ಮಿಕರ ಸುರಕ್ಷತೆ, ಆರೋಗ್ಯ ಮತ್ತು ಕಲ್ಯಾಣ ಸಂಬಂಧ ಕಾನೂನುಗಳನ್ನು ಅನುಷ್ಠಾನಗೊಳಿಸಲು ಜಾರಿಗೆ ತರಲಾಗಿದೆ ಹಾಗೂ ಕರ್ನಾಟಕ ಸರ್ಕಾರವು 2006ರಲ್ಲಿ ಅದರ ನಿಯಮಗಳನ್ನು ರೂಪಿಸಿ ಜಾರಿಗೆ ತಂದಿದೆ. ಈ ಕಾಯ್ದೆ ಮತ್ತು ನಿಯಮಗಳಲ್ಲಿ 10.00 ಲಕ್ಷಕ್ಕಿಂತ ಹೆಚ್ಚು ನಿರ್ಮಾಣ ವೆಚ್ಚದ ಕಾಮಗಾರಿಗಳಲ್ಲಿ ತೊಡಗಿರುವ ಕಾರ್ಮಿಕರಿಗೆ ಸೌಲಭ್ಯಗಳನ್ನು ದೊರಕಿಸಿಕೊಡುವುದು ಈ ಕಾಯ್ದೆಯ ಜಾರಿಯ ಉದ್ದೇಶವಾಗಿರುತ್ತದೆ. ಕರ್ನಾಟಕ ಸರ್ಕಾರವು 25.00 ಕೋಟಿಗಿಂತ ಹೆಚ್ಚು ಮೊತ್ತದ ಕಾಮಗಾರಿಗಳಲ್ಲಿ ಸುರಕ್ಷತೆ ಮತ್ತು ಆರೋಗ್ಯದ ಕಾನೂನುಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಇಲಾಖೆಗೆ ನೀಡಿದ್ದು ಇಲಾಖೆಯು ಜಾರಿಗೊಳಿಸುತ್ತಿರುವ ಕಾರ್ಖಾನೆ ಕಾಯ್ದೆ, 1948, ವೇತನ ಸಂದಾಯ ಕಾಯ್ದೆ, 1936 ಮತ್ತು ಪ್ರಸೂತಿ ಸೌಲಭ್ಯ ಕಾಯ್ದೆ, 1961 ಹಾಗೂ ಇತರೆ ಕಾಯ್ದೆಗಳ ಜಾರಿಯ ಜೊತೆಗೆ ಮೇಲಿನ ಹೊಸ ಕಾಯ್ದೆಯ ಅನುಷ್ಠಾನದ ಜವಾಬ್ದಾರಿ ಸಹ ಇಲಾಖೆಯ ಅಧಿಕಾರಿಗಳ ಮೇಲಿರುತ್ತದೆ. ಪ್ರಸ್ತುತ ಇಲಾಖೆಯಲ್ಲಿ ಮೇಲ್ಮಟ್ಟದ ಮತ್ತು ಕೆಳಮಟ್ಟದ ಅಧಿಕಾರಿಗಳ ಕೊರತೆ ಇದ್ದು, ಮೇಲೆ ತಿಳಿಸಲಾದ ಎಲ್ಲಾ ಕಾನೂನುಗಳನ್ನು ಅನುಷ್ಠಾನಗೊಳಿಸುವ ಗುರುತರ ಜವಾಬ್ದಾರಿ ಸಹ ಇರುತ್ತದೆಂದು ಪ್ರಸ್ತಾಪಿಸಿರುತ್ತಾರೆ.

ಅನುಚ್ಛೇದ 371(ಜೆ) ರಡಿ ವಿಶೇಷ ಅಭಿವೃದ್ಧಿ ಯೋಜನೆಯನ್ವಯ ಈ ಪ್ರದೇಶದ ಆರು ಜಿಲ್ಲೆಗಳಲ್ಲಿನ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರ ಹಿತರಕ್ಷಣೆ ಕಾಪಾಡುವ ಸಂಬಂಧ ಮತ್ತು ಇತರೆ ಕಾನೂನುಗಳ ಅನುಷ್ಠಾನಕ್ಕೆ, ಹೈದರಾಬಾದ್ – ಕರ್ನಾಟಕ ಪ್ರದೇಶದ ಕಲಬುರಗಿ ಜಿಲ್ಲೆಯಲ್ಲಿ ಗ್ರೂಪ್ "ಎ' (ಸೀನಿಯರ್ ಶ್ರೇಣಿ) ಒಂದು ಕಾರ್ಖಾನೆಗಳ ಉಪ ನಿರ್ದೇಶಕರ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸಿದಲ್ಲಿ ಈ ಭಾಗದಲ್ಲಿನ ಕೆಲಸ ಕಾರ್ಯಗಳಿಗೆ ದೂರದ ಬೆಂಗಳೂರಿಗೆ ಬರುವ ಬದಲು ಸ್ಥಳೀಯವಾಗಿ ಮಾಡಿಸಿಕೊಳ್ಳಬಹುದಾಗಿದ್ದು, ಇದರಿಂದ ಅವರುಗಳ ಅಪಾರ ಶ್ರಮ, ಸಮಯ ಮತ್ತು ಹಣದ ವ್ಯಯವನ್ನು ತಪ್ಪಿಸಬಹುದಾಗಿದೆಯೆಂದು ಸಾರ್ವಜನಿಕ ಹಿತದೃಷ್ಟಿಯಿಂದ ಕಾರ್ಖಾನೆಗಳ ಉಪ ನಿರ್ದೇಶಕರ ಹುದ್ದೆಯನ್ನು ಸ್ಥಾಪಿಸುವ ಅವಶ್ಯಕತೆ ಇರುತ್ತದೆಂದು ತಿಳಿಸಿರುತ್ತಾರೆ.

ಕಾರ್ಖಾನೆಗಳ ಜಂಟಿ ನಿರ್ದೇಶಕರ ವ್ಯಾಪ್ತಿಗೆ ಹೈದರಾಬಾದ್ – ಕರ್ನಾಟಕ ಪ್ರದೇಶ ಒಳಗೊಂಡಂತೆ ಉತ್ತರ ಕರ್ನಾಟಕ ಸೇರಿ ಒಟ್ಟು ಇವರ ವ್ಯಾಪ್ತಿಯಲ್ಲಿ ಒಟ್ಟು 09 ಅಧೀನ ಅಧಿಕಾರಿಗಳು ಬರುವುದಿದ್ದು, ಆ ಪ್ರದೇಶದಲ್ಲಿನ ದೊಡ್ಡ ಉದ್ದಿಮೆಗಳು, ಸಿಮೆಂಟ್ ಕಾರ್ಖಾನೆಗಳು, ವಿದ್ಯುತ್ ಉತ್ಪಾದನಾ ಸ್ಥಾವರಗಳ ಸ್ಥಾಪನೆ ಕಟ್ಟಡ ನಿರ್ಮಾಣ ಮತ್ತು ಇತರೆ ಕಾಮಗಾರಿಗಳ ಮತ್ತು ಇತರೆ ವಿಷಯಗಳ ಉಸ್ತುವಾರಿಯನ್ನು ಅವರಿಗೆ ವಹಿಸಬಹುದಾಗಿದೆ ಹಾಗೂ ಆ ಪ್ರದೇಶದಲ್ಲಿ ಈ ಇಲಾಖೆಯ 4 ಕಛೇರಿಗಳ ಉಸ್ತುವಾರಿಯನ್ನೂ ಸಹ ಅವರಿಗೆ ವಹಿಸಬಹುದಾಗಿದೆಯೆಂದು ವರದಿ ಮಾಡಿ ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೈದರಾಬಾದ್ – ಕರ್ನಾಟಕ ಪ್ರದೇಶದ ಕಲಬುರಗಿ ಜಿಲ್ಲೆಯಲ್ಲಿ ಉಸ್ತುವಾರಿ ಅಧಿಕಾರಿಯಾಗಿ ಕಾರ್ಖಾನೆಗಳ ಜಂಟಿ ನಿರ್ದೇಶಕರ ಹುದ್ದೆ ಹಾಗೂ ಬೀದರ್, ಕಲಬುರಗಿ ಮತ್ತು ವಿಜಯಪುರ ಪ್ರದೇಶದ ಕ್ಷೇತ್ರಾಧಿಕಾರಿಯಾಗಿ ಮತ್ತು ಇಬ್ಬರು ಕ್ಷೇತ್ರಾಧಿಕಾರಿಗಳಿಗೆ ಕಾರ್ಖಾನೆಗಳ ನೊಂದಣಿ ಮತ್ತು ಕಟ್ಟಡ ಮತ್ತು ಇತರೆ ನಿರ್ಮಾಣದ ಕಾಮಗಾರಿಗಳ ಎಸ್ಕಾವೇಷನ್ ಪ್ಲಾನ್‌ಗಳ ಅನುಮೋದನಾಧಿಕಾರಿಯಾಗಿ ಕಾರ್ಖಾನೆಗಳ ಉಪ ನಿರ್ದೇಶಕರು ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಕಛೇರಿಗಳನ್ನು ಸ್ಥಾಪಿಸಲು ಕೋರಿರುತ್ತಾರೆ.

**ಕಾರ್ಖಾನೆಗಳ ಜಂಟಿ ನಿರ್ದೇಶಕರ ಕಛೇರಿ, ಕಲಬುರಗಿ ವಿಭಾಗ ಕಲಬುರಗಿ**

(ಹೈದರಾಬಾದ್– ಕರ್ನಾಟಕ ಪ್ರದೇಶದ 06 ಜಿಲ್ಲೆಗಳಲ್ಲಿ ಉಸ್ತುವಾರಿ ಅಧಿಕಾರಿ)

| ಕ್ರ. ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಜಂಟಿ ನಿರ್ದೇಶಕರು | 01 |
| 2 | ಪತ್ರಾಂಕಿತ ವ್ಯವಸ್ಥಾಪಕರು | 01 |
| 3 | ಶೀಘ್ರಲಿಪಿಗಾರರು | 01 |
| 4 | ಪ್ರಥಮ ದರ್ಜೆ ಸಹಾಯಕರು | 01 |
| 5 | ದ್ವಿತೀಯ ದರ್ಜೆ ಸಹಾಯಕರು | 01 |
| 6 | ಗ್ರೂಪ್ ಡಿ | 01 |

**ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ, ಕಲಬುರಗಿ ವಿಭಾಗ ಕಲಬುರಗಿ**

(_ಹೈದರಾಬಾದ್–ಕರ್ನಾಟಕ ಪ್ರದೇಶದ 03 ಜಿಲ್ಲೆಗಳಿಗೆ ಕ್ಷೇತ್ರಾಧಿಕಾರಿ ಮತ್ತು ಇಬ್ಬರು ಕ್ಷೇತ್ರಾಧಿಕಾರಿಗಳಿಗೆ ಕಾರ್ಖಾನೆಗಳ ನೋಂದಣಿ ಮತ್ತು ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳ ಎಸ್ಕವೇಶನ್ ಪ್ಲಾನುಗಳ ಅನುಮೋದನಾಧಿಕಾರಿ)

| ಕ್ರಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಉಪ ನಿರ್ದೇಶಕರು | 01 |
| 2 | ಪತ್ರಾಂಕಿತ ವ್ಯವಸ್ಥಾಪಕರು | 01 |
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ದ್ವಿತೀಯ ದರ್ಜೆ ಸಹಾಯಕರು | 02 |
| 5 | ಗ್ರೂಪ್ ಡಿ | 01 |

ಮುಂದುವರೆದು, ದಿನಾಂಕ: 02–02–2014ರ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ಇವರು ಕಾರ್ಖಾನೆಗಳ ಜಂಟಿ ನಿರ್ದೇಶಕರು ಮತ್ತು ಕಾರ್ಖಾನೆಗಳ ಉಪ ನಿರ್ದೇಶಕರು ಕಛೇರಿ ಸ್ಥಾಪನೆ ಜೊತೆಯಲ್ಲಿ ಹಾಲಿ ಇರುವ ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಹುದ್ದೆಯನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸಿ ಯಾದಗಿರಿ ಮತ್ತು ರಾಯಚೂರು ಜಿಲ್ಲೆಗಳ ಕ್ಷೇತ್ರವ್ಯಾಪ್ತಿ ವಹಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಹೈದರಾಬಾದ್ – ಕರ್ನಾಟಕ ಪ್ರದೇಶದ ವಿಶೇಷ ಅಭಿವೃದ್ಧಿ ಯೋಜನೆಯಂತೆ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಅಧಿಕಾರಿ / ಸಿಬ್ಬಂದಿಗಳ ಹುದ್ದೆಗಳನ್ನು ಸೃಜಿಸಿ ಕಛೇರಿ ಸ್ಥಾಪಿಸಲು ಮಂಜೂರಾತಿ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 57 ಕಾಬಾಸೇ 2014, ದಿನಾಂಕ: 30-10-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಕಾರ್ಖಾನೆಗಳು ಮತ್ತು ಬಾಯ್ಲರುಗಳ, ವಿಭಾಗಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಹೊಸದಾಗಿ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಕಾರ್ಖಾನೆಗಳ ಜಂಟಿ ನಿರ್ದೇಶಕರ ಕಛೇರಿ, ಬಳ್ಳಾರಿ,**

(ಹೈದರಾಬಾದ್-ಕರ್ನಾಟಕ 06 ಜಿಲ್ಲೆಗಳಿಗೆ ಉಸ್ತುವಾರಿ ಅಧಿಕಾರಿ)

| ಕ್ರ ಸ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಜಂಟಿ ನಿರ್ದೇಶಕರು | 01 |
| 2 | ಗೆಜೆಟೆಡ್ ಮ್ಯಾನೇಜರ್ | 01 |
| 3 | ಶೀಘ್ರಲಿಪಿಗಾರರು | 01 |
| 4 | ಪ್ರಥಮ ದರ್ಜೆ ಸಹಾಯಕರು | 01 |
| 5 | ದ್ವಿತೀಯ ದರ್ಜೆ ಸಹಾಯಕರು | 01 |
| 6 | ಗ್ರೂಪ್ ಡಿ | 01 |
| | ಒಟ್ಟು | 06 |

**ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ಕಲಬುರಗಿ,**

(ಹೈದರಾಬಾದ್-ಕರ್ನಾಟಕ ಪ್ರದೇಶದ 03 ಜಿಲ್ಲೆಗಳಿಗೆ ಕ್ಷೇತ್ರಾಧಿಕಾರಿ ಮತ್ತು ಇಬ್ಬರು ಕ್ಷೇತ್ರಾಧಿಕಾರಿಗಳಿಗೆ ಕಾರ್ಖಾನೆಗಳ ನೋಂದಣಿ ಮತ್ತು ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳ ಎಸ್ಕವೇಶನ್ ಪ್ಲಾನುಗಳ ಅನುಮೋದನಾಧಿಕಾರಿ)

| ಕ್ರ ಸ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಉಪ ನಿರ್ದೇಶಕರು | 01 |
| 2 | ಪತ್ರಾಂಕಿತ ವ್ಯವಸ್ಥಾಪಕರು | 01 |
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ದ್ವಿತೀಯ ದರ್ಜೆ ಸಹಾಯಕರು | 02 |
| 5 | ಗ್ರೂಪ್ ಡಿ | 01 |
| | **ಒಟ್ಟು** | **06** |

ಮುಂದುವರೆದು, ಕಾರ್ಖಾನೆಗಳ ಸಹಾಯಕ ನಿರ್ದೇಶಕರು (ವೇತನ ಶ್ರೇಣಿ ರೂ. 22,800-43,200), ಕಲಬುರಗಿ ವಿಭಾಗ, ಕಲಬುರಗಿ, ಹುದ್ದೆಯನ್ನು ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (ವೇತನ ಶ್ರೇಣಿ ರೂ. 28,100-50,100) ಕಲಬುರಗಿ ವಿಭಾಗ, ಕಲಬುರಗಿ, ಹುದ್ದೆಯನ್ನಾಗಿ ಉನ್ನತೀಕರಿಸಲು ಸಹಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 747 ವೆಚ್ಚ-09/2014, ದಿನಾಂಕ: 25-05-2015ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೋರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

**PR. 31**

**SC. 50**

## ಕಾರ್ಮಿಕ ಸಚಿವಾಲಯ

**ವಿಷಯ:-** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ಬಾಯ್ಲರ್ ಮೆಟೀರಿಯಲ್ ಪರೀಕ್ಷೆ ಮತ್ತು ತರಬೇತಿ ಕೇಂದ್ರವನ್ನು ಸುಸೂತ್ರವಾಗಿ ನಡೆಸಲು ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡುವ ಬಗ್ಗೆ

**ಓದಲಾಗಿದೆ:-** ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಇಎಸ್‌ಟಿ-1/ಆರ್‌ಪಿಪಿ/ಸಿಆರ್-41/2014-15,ದಿನಾಂಕ:20-04-2015,06-05-2015, 07-08-2015 ಮತ್ತು 07-08-2015

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಪ್ರಸ್ತಾವನೆ:–**

2015–16ನೇ ಸಾಲಿನ, ಮಾನ್ಯ ಮುಖ್ಯ ಮಂತ್ರಿಯವರ ಆಯ–ವ್ಯಯ ಭಾಷಣದಲ್ಲಿ ಬಾಯ್ಲರ್ ತಯಾರಿಕೆಗೆ ಉಪಯೋಗಿಸುವ ವಸ್ತುಗಳ ಗುಣಲಕ್ಷಣಗಳನ್ನು ಪರೀಕ್ಷಿಸಲು ಮತ್ತು ಬಾಯ್ಲರ್ ವೆಲ್ಡರ್ ಪರೀಕ್ಷೆಗೆ ಅವಶ್ಯವಿರುವ ಪ್ರಯೋಗಾಲಯ ಸ್ಥಾಪಿಸಲು ಬಾಯ್ಲರ್ ಮೆಟೀರಿಯಲ್ ಪರೀಕ್ಷೆ ಮತ್ತು ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗುವುದೆಂದು ಘೋಷಿಸಿರುತ್ತಾರೆ. ಆ ಪ್ರಕಾರವಾಗಿ ನಿರ್ದೇಶಕರು. ಕಾರ್ಖಾನೆ ಮತ್ತು ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬಾಯ್ಲರ್ ಮೆಟೀರಿಯಲ್ ಪರೀಕ್ಷೆ ಮತ್ತು ತರಬೇತಿ ಕೇಂದ್ರವನ್ನು ಸ್ಥಾಪಿಸಲು ಅಗತ್ಯವಿರುವ ಅನುದಾನ ರೂ. 173 ಲಕ್ಷಗಳನ್ನು ಮಂಜೂರು ಮಾಡಿರುವುದಿಲ್ಲ. ಆದ್ದರಿಂದ ಈ ಸಾಲಿನ ಆಯ–ವ್ಯಯದಲ್ಲಿ ಬಾಯ್ಲರ್ ಮೆಟೀರಿಯಲ್ ಪರೀಕ್ಷೆ ಮತ್ತು ತರಬೇತಿ ಕೇಂದ್ರವನ್ನು ಆರಂಭಿಸಲು ಅನುದಾನವನ್ನು ಬಿಡುಗಡೆ ಮಾಡಿ ಈ ಯೋಜನೆಯನ್ನು ಸೇರ್ಪಡಿಸಿಕೊಳ್ಳುವ ಅಗತ್ಯವಿರುತ್ತದೆ. ಆದ್ದರಿಂದ 2015–16ನೇ ಸಾಲಿಗೆ ರೂ. 173 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಹಾಗೂ ಅಗತ್ಯ ಅಧಿಕಾರಿ/ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಾಇ 09 ಕಾಬಾಸೇ 2015 (ಭಾಗ–1) ಬೆಂಗಳೂರು, ದಿನಾಂಕ: 17–12–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ಬಾಯ್ಲರ್ ಮೆಟೀರಿಯಲ್ ಪರೀಕ್ಷೆ ಮತ್ತು ತರಬೇತಿ ಕೇಂದ್ರವನ್ನು ಸುಸೂತ್ರವಾಗಿ ನಡೆಸಲು ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿದೆ ಹಾಗೂ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಮಂಜೂರಾತಿ ನೀಡಲಾಗಿದೆ:–

| ಕ್ರ.ಸಂ. | ಪದನಾಮ | ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1. | ಉಪ ನಿರ್ದೇಶಕರು | 01 | ವೃಂದ ಮತ್ತು ನೇಮಕಾತಿ ನಿಯಮಾನುಸಾರ |
| 2. | ಲ್ಯಾಬ್ ಟೆಕ್ನೀಷಿಯನ್ | 01 | ಹೊರ ಗುತ್ತಿಗೆ ಆಧಾರದ ಮೇಲೆ |
| 3. | ಲ್ಯಾಬ್ ಅಟೆಂಡರ್ | 01 | |
| 4. | ವಾಹನ ಚಾಲಕ | 01 | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 650 ವೆ–9/2015, ದಿನಾಂಕ: 25–11–2015ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಕ್ಷ್ಮೀದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)

ಕಾರ್ಮಿಕ ಇಲಾಖೆ, (ಕಾರ್ಖಾನೆಗಳು ಮತ್ತು ಬಾಯ್ಲರುಗಳು).

**PR. 19**

**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59